# ಬಿನ್ನಹ

ಮಹಾಪುರುಷರ ಜೀವನವು ಆದರ್ಶಪ್ರಾಯವಾದುದು. ನೈತಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿರುವ ಮಹಾಪುರುಷರು ಪ್ರಪಂಚದಲ್ಲಿ ಅನೇಕ ಮಂದಿ ಇರುವರು. ಅವರಲ್ಲಿ ಕೇವಲ ಧರ್ಮ ಬೋಧನೆಯನ್ನು ಮಾತ್ರ ಮಾಡಿದ ಪ್ರಮುಖ ವಿಭೂತಿ ಪುರುಷರನ್ನು ಆರಿಸಿಕೊಂಡು, ಧರ್ಮವೀರರೆಂದು ನಾಮಕರಣಮಾಡಿ ಈ ಗ್ರಂಥದಲ್ಲಿ ಅವರ ಚರಿತ್ರೆಯ ಸಂಗ್ರಹ ನಿರೂಪಣೆಯನ್ನು ಕೊಡಲಾಗಿದೆ. ಅನೇಕವೇಳೆ ಧರ್ಮಕ್ಕೆ ಗ್ಲಾನಿ ಬಂದಾಗಲೆಲ್ಲಾ ಪರಮಾತ್ಮನೇ ಭೂಲೋಕದಲ್ಲಿ ಮಾನವ ರೂಪದಲ್ಲಿ ಅವತರಿಸಿ ಧರ್ಮೋದ್ಧಾರ ಮಾಡಿರುವನು. ಕೆಲವು ಸಂದರ್ಭಗಳಲ್ಲಿ ತನ್ನ ಅಂಶ ಪುರುಷರನ್ನು ಜಗತ್ತಿನಲ್ಲಿ ಜನಿಸುವಂತೆ ಆಜ್ಞಾಪಿಸಿ, ಅವರಿಂದ ಲೋಕ ಕಲ್ಯಾಣಾರ್ಥವಾಗಿ ಧರ್ಮೋಪದೇಶ ಮಾಡಿಸಿರುವನು. ಭಾರತೀಯರಾದ ನಾವು ಅನೇಕ ಧರ್ಮಾವಲಂಬಿಗಳಾಗಿದ್ದರೂ, ಆಯಾ ಧರ್ಮದವರು ಕೂಡ ಆಯಾ ಮತಸ್ಥಾಪಕರ ದಿವ್ಯ ಚರಿತ್ರೆಗಳನ್ನು ಸಂಪೂರ್ಣವಾಗಿ ತಿಳಿದುಕೊಂಡಿರುವ ಅಂಶವು ಸಂದೇಹಾಸ್ಪದವೇ ಸರಿ. ಹೀಗಿರಲು ಮುಖ್ಯವಾದೆಲ್ಲ ಮತ ಬೋಧಕರ ಜೀವನ ಚರಿತ್ರೆಗಳನ್ನು ತಿಳಿದು ಹಾಕಲು ಕಾಲವೆಲ್ಲಿಂದ ಬರಬೇಕು?—ಎಂಬೀತೆರನಾಗಿ ಭಾವಿಸುವವರ ದೃಷ್ಟಿಯಿಂದ, ಈ ಬಗೆಯ ಗ್ರಂಥವು ಓದುಗರಿಗೆ ಅತ್ಯಾವಶ್ಯಕವಾಗಿದೆ.

ಕೆಲವು ಮತಸ್ಥಾಪಕರ ಚರಿತ್ರೆಗಳನ್ನು ಕೆಲಕೆಲವು ವರ್ಷಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಶಾಲೆಗಳ ಪಠ್ಯಪುಸ್ತಕವಾಗಿಯೂ ನಿಯಮಿಸಲಾಗಿತ್ತು ಸರ್ವಮತ ಸಹಿಷ್ಣುತೆಯನ್ನಭ್ಯಸಿಸಿ ವಿಶಾಲಭಾವನೆಯನ್ನು ತಂದುಕೊಳ್ಳಲು ಎಲ್ಲ ಧರ್ಮವೀರರ ಸಂಗ್ರಹ ಪರಿಚಯವಾಗಲೇ ಬೇಕೆಂಬುದು ನಿರ್ವಿವಾದವಾಗಿದೆ.

ಈ ಗ್ರಂಥದಲ್ಲಿ ತೆಗೆದುಕೊಂಡಿರುವ ಮತಬೋಧಕರ ವಿಚಾರವನ್ನು ಕ್ರಿಸ್ತಪೂರ್ವದಿಂದ ಹಿಡಿದು ಇಲ್ಲಿಯವರೆಗಿದ್ದ ಕ್ರಮದಲ್ಲಿ ನೋಡಬಹುದು. ಹೆಚ್ಚಿನ ಪವಾಡ ಸಂಗತಿಗಳನ್ನೂ, ಉಪದೇಶ ಭಾಗಗಳನ್ನೂ ಬಿಟ್ಟು, ಆದಷ್ಟು ಜೀವನ ಚರಿತ್ರೆಯನ್ನು ಮಾತ್ರ ಸಂಗ್ರಹಿಸಿರುವುದರಿಂದ, ಯಾವ

ಮತದವರೇ ಆಗಲಿ ಅನ್ಯಥಾ ಭಾವಿಸಲು ಕಾರಣವಿಲ್ಲ. ಸಂಪೂರ್ಣ ವ್ಯಕ್ತಿ ಚಿತ್ರವನ್ನು ಚಿತ್ರಿಸುವುದು ಸಂಗ್ರಹ ಚರಿತ್ರೆಗಳಿಂದ ಸಾಧ್ಯವಿಲ್ಲ. ಕೆಲವು ಪವಾಡಗಳು ಬಿಟ್ಟುಹೋದ ಮಾತ್ರಕ್ಕೆ ಯಾವ ಧರ್ಮವೀರರನ್ನೂ ಹೋಲಿಕೆ ಯಿಂದ ಮೇಲುಕೀಳಾಗಿ ತಿಳಿದವರು ಭಾವಿಸಬಾರದು. ವಿದ್ಯಾರ್ಥಿಗಳು ಬರವಣಿಗೆಯ ರೀತಿಯನ್ನು ತಿಳಿಯಲೆಂದು ಇಲ್ಲಿ ಕೊಟ್ಟಿರುವ ಚರಿತ್ರೆಗಳಲ್ಲಿ ಕೆಲವನ್ನು ಉದ್ದೇಶಪೂರ್ವಕವಾಗಿಯೇ ಪರೋಕ್ಷ ಕಥನದಲ್ಲಿ ಬರೆಯಲಾಗಿದೆ. ಏಕೆಂದರೆ ವಿಸ್ತಾರ ವಿಷಯವನ್ನು ಪ್ರತ್ಯಕ್ಷ ಕಥನದಲ್ಲಿಟ್ಟಾಗ ವಿದ್ಯಾರ್ಥಿಗಳು ಅವುಗಳನ್ನು ಸಂಗ್ರಹಿಸುವ ವಿಧಾನದಲ್ಲಿ ಕಾಲ ಮತ್ತು ಪುಟಗಳ ಮಿತಿಯನ್ನು ಮರೆತು ಮತ್ತಷ್ಟು ದೀರ್ಘಮಾಡಿ ಬರೆವಣಿಗೆಯ ಪ್ರಯತ್ನದಲ್ಲಿ ವಿಫಲ ಗೊಂಡಿರುವುದು ಅನೇಕ ಅಧ್ಯಾಪಕರ ಗಮನಕ್ಕೆ ಬಂದಿರಬಹುದು.

ಮತ ಭ್ರಾಂತಿಯನ್ನು ನೀಗಿ, ಧರ್ಮಬೋಧಕರ ಹಿತವಚನಗಳಿಗೆ ಕಿವಿಗೊಟ್ಟಾಗ ಮಾತ್ರ, ಎಲ್ಲರ ಮಾತೂ ಪಥ್ಯವಾಗಿರುವುದು. "ಪ್ರಪಂಚದಲ್ಲಿ ಶ್ರೇಷ್ಠನಾದವನು ಹೇಗೆ ಆಚರಿಸುವನೋ, ಹಾಗೆ ಸಾಮಾನ್ಯಜನಗಳೂ ಆಚರಿಸುವರು. ಯಾವುದನ್ನು ಪ್ರಮಾಣವೆಂದು ಶ್ರೇಷ್ಠರು ಒಪ್ಪುವರೋ ಲೋಕವೂ ಅದನ್ನೇ ಒಪ್ಪುವುದು." ಎಂಬೀ ಗೀತಾ ಸಂದೇಶವನ್ನು ಈ ಸಂದರ್ಭದಲ್ಲಿ ಓದುಗರ ಜ್ಞಾಪಕಕ್ಕೆ ತರಬಹುದಾಗಿದೆ. ಆದಕಾರಣ ಎಲ್ಲ ದೃಷ್ಟಿಯಿಂದಲೂ ಧರ್ಮವೀರರ ಚರಿತ್ರೆಯನ್ನು ಅಭ್ಯಸಿಸುವುದು ಆದ್ಯಕರ್ತವ್ಯ ವೆಂದು ಹೇಳಿದ ಹಾಗಾಯಿತು.

ಈ ಗ್ರಂಥವನ್ನು ಉಪಪಠ್ಯ ಪುಸ್ತಕದ ದೃಷ್ಟಿಯಿಂದ ಸಂಗ್ರಹಿಸಿರುವುದ ರಿಂದ ವಿವಿಧ ಪ್ರಶ್ನಾವಳಿಯನ್ನಾಗಲೀ ಟಿಪ್ಪಣಿಯನ್ನಾಗಲೀ ಸೇರಿಸಿಲ್ಲ. ಆದಷ್ಟು ಗ್ರಂಥಾಧಾರಗಳಿಂದ ವಿಷಯಗಳನ್ನು ಸುಲಭ ಶೈಲಿಯಲ್ಲಿ ನಮೂದಿಸುವ ಪ್ರಯತ್ನ ನಡೆಯಿಸಲಾಗಿದೆ. ಕೊನೆಯದಾಗಿ ಈ ಪುಸ್ತಕವನ್ನು ಓದಿ ಸಲಹೆ ಇತ್ತ ನಮ್ಮ ಮಿತ್ರರಿಗೂ, ಪ್ರಕಾಶಕರಿಗೂ ಮತ್ತು ಅಚ್ಚುಕೂಟ ದವರಿಗೂ ನಾವು ಕೃತಜ್ಞರಾಗಿರುತ್ತೇವೆ.

ಸಂಗ್ರಹಕಾರರು

# ಭಗವಾನ್ ಮಹಾವೀರಸ್ವಾಮಿ

ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲಿ ಉತ್ತರ ಭಾರತದ ಒಂದು ಪ್ರಾಂತದಲ್ಲಿ ಉತ್ತಮ ಕ್ಷತ್ರಿಯ ಕುಲವಾದ ಇಕ್ಷ್ವಾಕು ವಂಶಕ್ಕೆ ಸೇರಿದ ಸಿದ್ಧಾರ್ಥನೆಂಬ ಧರ್ಮಿಷ್ಠನಾದ ರಾಜನಿದ್ದನು. ವೈಶಾಲಿಯ ರಾಜಪುತ್ರಿಯಾದ ಪ್ರಿಯಕಾರಿಣಿಯು ಈತನ ಮಡದಿಯಾಗಿದ್ದಳು. ಈ ದಂಪತಿಗಳಿಗೆ ಬಹುಕಾಲವಾದರೂ ಮಕ್ಕಳಿರಲಿಲ್ಲ. ತೀರ್ಥಂಕರರಂತಹ ಪವಿತ್ರಾತ್ಮನಾದ ಪುತ್ರನು ತಮ್ಮಲ್ಲಿ ಉದಯಿಸಬೇಕೆಂದು ಸದಾ ಭಗವಂತನಲ್ಲಿ ಮೊರೆಯಿಡುತ್ತಿದ್ದರು. ಜೈನರಿಗೆ ತೀರ್ಥಂಕರರು ದೇವಸಮಾನರು. ಅವರಲ್ಲಿರುವ ಇಪ್ಪತ್ತನಾಲ್ಕು ಮಂದಿ ತೀರ್ಥಂಕರರಲ್ಲಿ ಋಷಭನಾಥನು ಮೊದಲನೆಯವನು. ಕೊನೆಯವನೇ ಭಗವಾನ್ ಮಹಾವೀರಸ್ವಾಮಿಯು. ಇವರೆಲ್ಲರೂ ಕ್ಷತ್ರಿಯ ವಂಶದಲ್ಲಿಯೇ ಹುಟ್ಟಿದವರು.

ಸಿದ್ಧಾರ್ಥ ಪ್ರಿಯಕಾರಿಣಿಯರ ತಪಸ್ಸಿದ್ಧಿಯ ಫಲವಾಗಿ, ಮಹಾವೀರಸ್ವಾಮಿಯು ಅವರ ಮಗನಾಗಿ ಭೂಲೋಕದಲ್ಲಿ ಅವತರಿಸಿದನು. ಈ ಮಹಾಪುರುಷನಿಂದ ಆಗಿನ ಕಾಲದಲ್ಲಿ ವಿಶೇಷವಾಗಿ ನಡೆಯುತ್ತಿದ್ದ ಪಶುವಧೆ ನಿಂತು, ಅಹಿಂಸಾ ಧರ್ಮಸ್ಥಾಪನೆಯಾಗಲು ಕಾರಣವಾಯಿತು.

ಈಗಿನ ಬಿಹಾರ್ ಪ್ರಾಂತವು ಹಿಂದೆ ಸಿದ್ಧಾರ್ಥ ರಾಜನಿಗೆ ಸೇರಿತ್ತು. ಆ ಪ್ರದೇಶದಲ್ಲಿದ್ದ ಕುಂಡ ಗ್ರಾಮದಲ್ಲಿ ಋಷಭದತ್ತನೆಂಬ ಬ್ರಾಹ್ಮಣೋತ್ತಮನಿದ್ದನು. ಈತನ ಪತ್ನಿಯಾದ ದೇವಾನಂದಳೆಂಬ ಮಹಾ ಸಾಧ್ವಿಯ ಗರ್ಭದಲ್ಲಿ ಮೊದಲು ಮಹಾವೀರಸ್ವಾಮಿಯು ಬೆಳೆಯುತ್ತಿದ್ದನು. ಈ ಸಂಗತಿಯನ್ನು ತಿಳಿದ ಇಂದ್ರನು ಬ್ರಾಹ್ಮಣ ಸ್ತ್ರೀಗರ್ಭದಲ್ಲಿ ಬೆಳೆಯುತ್ತಿದ್ದ ಮಹಾವೀರನ ಗರ್ಭ ಪಿಂಡವನ್ನು ಕ್ಷತ್ರಿಯಳಾದ ಪ್ರಿಯಕಾರಿಣಿಯ ಗರ್ಭಕ್ಕೆ ಮಾಯೆಯಿಂದ ಸಾಗಿಸಿದನು. ಈ ಕಾರಣದಿಂದ ಪ್ರಿಯಕಾರಿಣಿಯು ತನ್ನ ಗರ್ಭದಲ್ಲಿ ಈ ಪುಣ್ಯ ಮೂರ್ತಿಯನ್ನು ಧರಿಸಿದಳು. ಹೀಗೆ ಮಹಾವೀರನ ಜೀವವು ಪ್ರಿಯಕಾರಿಣಿಯ ಗರ್ಭಕ್ಕೆ ಬಂದೊಡನೆಯೇ ದೇವತೆಗಳು ಮಂಗಳವಾದ್ಯ

ಗಳನ್ನು ಮಾಡಿದರು. ಸ್ವಾಮಿಯ ಅವತಾರಕ್ಕೆ ಮುಂಚೆ ಆಕೆಗೆ ದಿವ್ಯವಾದ ಹದಿನಾರುಬಗೆಯ ಸ್ವಪ್ನಗಳಾದುವು. ಆನೆ, ಎತ್ತು, ಸಿಂಹ, ಲಕ್ಷ್ಮಿ, ಹೂ ಮಾಲೆಗಳು, ಚಂದ್ರ, ಸೂರ್ಯ, ಮೀನು ತುಂಬಿದ ಕೊಡ, ಪದ್ಮಸರೋವರ, ಸಮುದ್ರ, ಸಿಂಹಾಸನ, ದೇವವಿಮಾನ, ನಾಗಭವನ, ರತ್ನದರಾಸಿ, ಪ್ರಜ್ವಲಿಸುವ ಬೆಂಕಿ–ಇವುಗಳನ್ನು ಆಕೆಯು ಶುಭ ಸ್ವಪ್ನದಲ್ಲಿ ಕಂಡಕೂಡಲೇ, ಸಿದ್ಧಾರ್ಥ ರಾಜನು ಆ ವೃತ್ತಾಂತವನ್ನು ಕೇಳಿ ಸಂತೋಷಪಟ್ಟು ಆಕೆಗೆ ಸ್ವಪ್ನ ಫಲವನ್ನು ವಿಸ್ತರಿಸಿದನು. ಆನೆಯನ್ನು ಕಂಡುದದರಿಂದ ತಮ್ಮ ಮಗನು ತೀರ್ಥಂಕರನಾಗುವನೆಂದೂ, ಗೂಳಿಯನ್ನು ಕಂಡುದರಿಂದ ಧರ್ಮ ಪ್ರಚಾರ ಮಾಡುವನೆಂದೂ, ಸಿಂಹದರ್ಶನದಿಂದ ಪ್ರಭಾವಶಾಲಿಯಾಗುವನೆಂದೂ, ಪತ್ನಿಗೆ ತಿಳಿಸಿದನು. ಲಕ್ಷ್ಮಿಯನ್ನು ಕಂಡುದರಿಂದ ಅವರ ಮಗನಿಗೆ ದೇವತೆಗಳು ಅಭಿಷೇಕ ಮಾಡುವರೆಂದೂ, ತಮ್ಮ ಮಗನು ಪುಷ್ಪದಂತೆ ಪರಿಮಳಯುಕ್ತನೂ, ಚಂದ್ರನಂತೆ ಆಹ್ಲಾದಕರನೂ, ಆಗುವನೆಂದನು. ಸೂರ್ಯನು ಅಜ್ಞಾನನಿವಾರಣೆಗೆ ಮೂಲನೆಂದೂ, ಮೀನುಗಳು ಸುಖಸೂಚಕಗಳೆಂದೂ ಅರುಹಿದನು. ಕುಂಭದರ್ಶನವು ಮಗನು ಉತ್ತಮ ಧ್ಯಾನಿಯಾಗುವ ಚಿಹ್ನೆಯೆಂದೂ, ಜೀವಿಗಳ ರಕ್ಷಣೆಯು ಸರೋವರ ದರ್ಶನ ಫಲವೆಂದೂ, ಸಮುದ್ರದ ನೋಟವು ಪುತ್ರನು ಪೂರ್ಣಜ್ಞಾನಿಯಾಗುವುದಕ್ಕೆ ಕುರುಹೆಂದೂ, ಸಿಂಹಾಸನವು ತಮ್ಮ ಸುತನು ಪಡೆಯುವ ಉತ್ಕೃಷ್ಟ ಪದವಿಯ ನಿರ್ದೇಶವೆಂದೂ ತನ್ನ ಪತ್ನಿಯೊಡನೆ ಸೂಚಿಸಿದನು. ಸ್ವರ್ಗದಿಂದ ಭೂಮಿಯಲ್ಲಿ ಅವತರಿಸುವನೆಂಬುದನ್ನು ವಿಮಾನವು ಸೂಚಿಸುವುದೆಂದೂ, ಮುಖ್ಯ ತೀರ್ಥವನ್ನು ಮುಂದುವರಿಸುವುದು ನಾಗಭವನದ (ದಿವ್ಯವಾದ ಅರಮನೆಯ) ಅಭಿಪ್ರಾಯವೆಂದೂ, ಅನಂತಗುಣಶಾಲಿಯಾಗುವನೆಂಬುದಕ್ಕೆ ರತ್ನದ ರಾಶಿಯು ಸೂಚಕವೆಂದೂ, ಅಗ್ನಿದರ್ಶನದಿಂದ ಸಮಸ್ತ ಕರ್ಮಗಳನ್ನೂ ನಾಶಮಾಡತಕ್ಕ ಪುತ್ರನು ಜನಿಸುವನೆಂದೂ ತನ್ನ ಮಡದಿಗೆ ವಿಸ್ತರಿಸಿ ಹೇಳಿ ಸಂತೋಷ ಹೊಂದಿದ್ದನು.

ಪ್ರಿಯಕಾರಿಣೀದೇವಿಗೆ ನವಮಾಸಗಳು ತುಂಬಿದ ನಂತರ, ಚೈತ್ರಶುದ್ಧ ತ್ರಯೋದಶಿಯ ರಾತ್ರಿ ಉತ್ತರ ಫಲ್ಗುನೀ ನಕ್ಷತ್ರವು ಕೂಡಿದ ಶುಭದಿನದಲ್ಲಿ (ಕ್ರಿ. ಪೂ. ೫೪೦ರಲ್ಲಿ) ಮಹಾವೀರನು ಜನಿಸಿದನು. ಆಗ ಎಲ್ಲೆಲ್ಲೂ ಮಂಗಳ ವಾದ್ಯಗಳಾದವು. ರಾಜ್ಯದಲ್ಲಿ ಸುಖಶಾಂತಿ ಸಂಪತ್ತುಗಳು ನೆಲಸಿದವು.

ತಂದೆ ತಾಯಿಗಳು ಆನಂದಭರಿತರಾಗಿ ತಮ್ಮ ಮಗುವಿಗೆ "ವರ್ಧಮಾನ" ಎಂಬ ಹೆಸರನ್ನಿಟ್ಟರು.

ತೀರ್ಥಂಕರನ ಜನನ ಸಂಗತಿಯು ದಿವ್ಯಜ್ಞಾನದ ಮೂಲಕ ಇಂದ್ರನಿಗೆ ತಿಳಿದು ಅವನು ಸಮಸ್ತ ಪರಿವಾರದೊಂದಿಗೆ ಕುಂಡಲಪುರಕ್ಕೆ ಬಂದನು. ಪ್ರಿಯಕಾರಿಣಿಯು ಸುಖನಿದ್ರೆಯಲ್ಲಿರುವಾಗ, ಇಂದ್ರಾಣಿಯು ಆಕೆಯಬಳಿ ಒಂದು ಮಾಯಾ ಶಿಶುವನ್ನು ಮಲಗಿಸಿ, ಮಹಾವೀರನನ್ನು ಇಂದ್ರನಿಗೆ ತಂದೊಪ್ಪಿಸಿದಳು. ಅಲ್ಲಿಂದ ತಮ್ಮತಮ್ಮ ವಾಹನಗಳಲ್ಲಿ ಕುಳಿತು ಎಲ್ಲರೂ ಆಕಾಶಮಾರ್ಗದಲ್ಲಿ ಹೊರಟು, ಸುಮೇರುಪರ್ವತಕ್ಕೆ ಬಂದಿಳಿದರು. ಅಲ್ಲಿ ರತ್ನ ಸಿಂಹಾಸನದಲ್ಲಿ ಮಹಾವೀರಸ್ವಾಮಿಯನ್ನು ಕುಳ್ಳಿರಿಸಿ, ಕ್ಷೀರಸಾಗರದಿಂದ ತಂದ ಹಾಲಿನಿಂದ ಜನ್ಮಾಭಿಷೇಕವನ್ನು ನಡೆಸಿದನು. ಬಳಿಕ ದೇವತೆಗಳು ದಿವ್ಯ ವಸ್ತ್ರಾಭರಣಗಳಿಂದ ಅಲಂಕರಿಸಿದ ಮಗುವನ್ನು ಅವರ ತಾಯಿಯ ಬಳಿಯಲ್ಲಿ ಬಿಟ್ಟು, ಮಾಯಾ ಶಿಶುವನ್ನು ಮಾಯ ಮಾಡಿ ಸ್ವಸ್ಥಾನಗಳಿಗೆ ಹೊರಟು ಹೋದರು ಇತ್ತ ಮಗುವನ್ನು ಕಂಡ ತಾಯಿ ತಂದೆಗಳ ಆನಂದಕ್ಕೆ ಪಾರವಿಲ್ಲದಂತಾಯಿತು.

ಮಹಾವೀರಸ್ವಾಮಿಯನ್ನು ದೇವತೆಗಳು "ವೀರನಾಥ" ಎಂದು ಸಂಬೋಧಿಸಿದರು. ಮಗುವು ಸುಂದರವಾಗಿಯೂ, ಪರಿಮಳಯುಕ್ತವಾಗಿಯೂ, ಮೃದುವಾಗಿಯೂ, ದೃಢವಾಗಿಯೂ ದಿವ್ಯ ಚಿಹ್ನೆಗಳಿಂದ ಭರಿತವಾಗಿಯೂ ಮತ್ತು ದಿವ್ಯ ತೇಜೋಯುಕ್ತವಾಗಿಯೂ ಕಂಗೊಳಿಸುತ್ತಿತ್ತು. ಮುನಿಗಳು ವರ್ಧಮಾನನನ್ನು ನೋಡಿ ಆನಂದಿಸಿ "ಸನ್ಮತಿ" ಎಂಬ ಹೆಸರನ್ನಿಟ್ಟರು. ಮಗುವು ದಿನೇ ದಿನೇ ಚಂದ್ರನಂತೆ ವರ್ಧಿಸುತ್ತಿದ್ದನು.

ದೈವದತ್ತವಾದ ಪೋಷಣೆಯಿಂದ ವರ್ಧಮಾನನು ಒಳ್ಳೆಯ ದೇಹದಾರ್ಢ್ಯವುಳ್ಳವನಾಗಿ ಬೆಳೆದು ಬಾಲಕನಾದನು. ಒಂದು ದಿನ ಬಾಲಕ ವರ್ಧಮಾನನು ಇತರ ಮಕ್ಕಳೊಡನೆ ಆಟವಾಡುತ್ತಿದ್ದಾಗ, ಸಂಗಮನೆಂಬ ದೇವತೆಯು ಸರ್ಪರೂಪದಿಂದ ಬಂದು, ಆ ಬಾಲಕನು ಹತ್ತಿದ್ದ ಮರಕ್ಕೆ ಸುತ್ತಿಕೊಂಡನು. ಆಗ ವರ್ಧಮಾನನು ನಿರ್ಭಯನಾಗಿ, ಸರ್ಪರೂಪಿಯಾದ ಆ ಸಂಗಮನ ಮರ್ದನ ಮಾಡಲು, ಹಾವಿನ ರೂಪದಿಂದ ಹೊರಗೆ ಬಂದ ದೇವತೆಯು ಬಾಲಕನಿಗೆ "ಮಹಾವೀರ" ಎಂಬ ಹೆಸರನ್ನಿಟ್ಟು ಆಶೀರ್ವದಿಸಿ, ಅಂತರ್ಧಾನನಾದನು. ಮತ್ತೊಮ್ಮೆ ಒಂದು ಮಾಯಾಗಜದೊಡನೆಯೂ

ಮಹಾವೀರನು ಹೋರಾಡಿ ಸಮಸ್ತರಿಂದ ಸನ್ಮಾನಿತನಾದನು. ದೇಹ ದಾರ್ಢ್ಯಕ್ಕಿಂತಲೂ ಹೆಚ್ಚಾಗಿ ಸಂಸಾರ ಬಂಧನವನ್ನೂ, ಮೋಹವನ್ನೂ ಜಯಿಸಿದುದರಿಂದ ಮಹಾವೀರನೆಂಬ ಹೆಸರು ಅನ್ವರ್ಥವಾಯಿತು.

ಮಹಾವೀರನಿಗೆ ಎಂಟುವರ್ಷ ವಯಸ್ಸಾದಾಗಲೇ, ಅವನು ಅಹಿಂಸೆ, ಸತ್ಯ, ತ್ಯಾಗಾದಿ ಹನ್ನೆರಡು ವ್ರತಗಳನ್ನೂ ಪಾಲಿಸಿದನು. ಮುಂದೆ ಸದ್ಗುರು ಗಳ ಸನ್ನಿಧಿಯಲ್ಲಿ ಸಕಲ ವಿದ್ಯೆಗಳನ್ನೂ ಅಭ್ಯಸಿಸಿದನು. ಮಹಾವೀರನಿಗೆ ಯೌವನವು ಬರಲು, ಅವನ ತಾಯಿತಂದೆಗಳು ಮಗನ ವಿವಾಹಕ್ಕೆ ಪ್ರಯತ್ನ ನಡೆಸಿದರು. ಆದರೆ ವರ್ಧಮಾನನು ವಿವಾಹಕ್ಕೊಪ್ಪದೆ ಬಾಲ ಬ್ರಹ್ಮಚಾರಿ ಯಾಗಿಯೇ ಇದ್ದನೆಂದು ದಿಗಂಬರರು ಅಭಿಪ್ರಾಯ ಪಟ್ಟಿರುವರು. ಮುಂದೆ ಮಹಾವೀರ ಸಂಘದಲ್ಲಿ ದಿಗಂಬರ ಮತ್ತು ಶ್ವೇತಾಂಬರವೆಂಬ ಎರಡು ಪಂಗಡಗಳಾದವು. ಮಹಾವೀರನು ಯಶೋದೆಯೆಂಬ ಕನ್ಯಾರತ್ನವನ್ನು ಕೈ ಹಿಡಿದನೆಂದೂ, ಅವಳಲ್ಲಿ ಪ್ರಿಯದರ್ಶನಳೆಂಬ ಪುತ್ರಿಯಾದಳೆಂದೂ ಶ್ವೇತಾಂಬರರ ಕಥೆಗಳು ತಿಳಿಸುತ್ತವೆ. ಮಹಾವೀರನ ಇಪ್ಪತೆಂಟನೆಯ ವರ್ಷದವರೆಗೂ ಅವನ ತಂದೆತಾಯಿಗಳು ಜೀವಂತರಾಗಿದ್ದರು. ತರುವಾಯ ಮೊದಲು ಆತನ ತಾಯಿಯೂ ಬಳಿಕ ತಂದೆಯೂ ಮೃತರಾದರು. ಪಿತೃವಿ ಯೋಗವಾದ ಮೇಲೆ ಒಂದು ವರ್ಷ ಕಾಲ ಮಾತ್ರ ಮಹಾವೀರನು ಮನೆಯಲ್ಲಿ ವಾಸವಾಗಿದ್ದನು. ಈತನಿಗೆ ಮೂವತ್ತನೆಯ ವರ್ಷಕ್ಕೆ ವೈರಾಗ್ಯವು ಪ್ರಾಪ್ತವಾಯಿತು

ಇದ್ದಕ್ಕಿದ್ದಂತೆ ಮಹಾವೀರನು ಸಂಸಾರ ತ್ಯಾಗಮಾಡಿ ರಾಜಗೃಹದಿಂದ ಹೊರಟು, ನಾಗಖಂಡ ವನಕ್ಕೆ ಪ್ರಯಾಣ ಮಾಡಿದನು. ಅಲ್ಲಿದ್ದ ಒಂದು ಅಶೋಕ ವೃಕ್ಷದ ಕೆಳಗೆ ಕುಳಿತು ಈ ಜಿನಸ್ವಾಮಿಯು ತನ್ನದಾಗಿದ್ದ ಎಲ್ಲ ವಸ್ತುಗಳನ್ನೂ ಅಲ್ಲಿದ್ದ ಮಂದಿಗೆ ಕೊಟ್ಟು, ಏಕವಸ್ತ್ರ ಧಾರಿಯಾಗಿ, ಪಂಚ ಮುಷ್ಟಿಗಳಿಂದ ಕೇಶೋತ್ಪಾದನ ಮಾಡಿಕೊಂಡು ತಪಸ್ಸಿಗೆ ಕುಳಿತನು. ಆಗ ಅಂತರಿಕ್ಷದಲ್ಲಿ ದೇವತೆಗಳು ನೆರೆದು ಈ ದೀಕ್ಷಾ ಕಲ್ಯಾಣವೆಂಬ ಉತ್ಸವವನ್ನು ನೋಡಿ ಸಂತೋಷದಿಂದ ಹಿಂದಿರುಗಿದರು.

ಮಹಾವೀರನು ಯೋಗಾರೂಢನಾಗಿ ಕೆಲವು ತಿಂಗಳು ಒಂದೇ ಕಡೆ ನಿಂತು ಧ್ಯಾನಮಾಡುತ್ತಲೂ, ಮತ್ತೆ ಕೆಲವು ಕಾಲ ಬೇರೆ ಬೇರೆ ವನಪ್ರದೇಶ ಗಳಲ್ಲಿ ಸುತ್ತಾಡುತ್ತಲೂ ಹನ್ನೆರಡು ವಿಧವಾದ ತಪಸ್ಸನ್ನು ಆಚರಿಸಿದನು.

ಹಾಗೆ ತಪೋನಿರತನಾಗಿದ್ದ ಕಾಲದಲ್ಲಿ, ಅತಿಮುಕ್ತಕವೆಂಬ ಪ್ರದೇಶದಲ್ಲಿ ಹನ್ನೆರಡನೆಯ ರುದ್ರನು ಪೂರ್ವ ಜನ್ಮ ವೈರದಿಂದ ಜಿನನಿಗೆ ನಾನಾವಿಧ ಉಪ ಸರ್ಗಗಳನ್ನು ಕೊಟ್ಟನು. ಆದ್ದಾಗ್ಯೂ ಮಹಾವೀರನು ಸ್ವಲ್ಪವೂ ಅಲುಗಾಡ ದಿದ್ದುದನ್ನು ಕಂಡು ನಾಚಿ ಅವನಿಗೆ "ಅತಿವೀರ" ಎಂಬ ಹೆಸರನ್ನಿಟ್ಟು ನಮಸ್ಕರಿಸಿ ಹೊರಟುಹೋದನು.

ಮುಂದೆ ಮಹಾವೀರನು ಉಜ್ಜಯಿನಿ, ಕೌಶಾಂಬಿ, ಚಂಪಾ ಮತ್ತು ವೈಶಾಲಿಗಳೇ ಮೊದಲಾದೆಡೆಗಳಲ್ಲೆಲ್ಲಾ ಸಂಚರಿಸಿ, ಅಲ್ಲಲ್ಲಿಯ ವನ ಪ್ರದೇಶ ಗಳಲ್ಲಿ ಹನ್ನೆರಡು ವರ್ಷಕಾಲ ಮೌನವ್ರತಧಾರಿಯಾಗಿ ತಪಸ್ಸನ್ನು ಮಾಡಿ ದನು. ಬಿಸಿಲು, ಮಳೆಗಾಳಿಗಳಿಗೆ ಹೆದರದೆ, ಯಾರೊಂದಿಗೂ ಮಾತನಾಡದೆ ಊರಿಂದೂರಿಗೆ ಹೋಗುತ್ತಿದ್ದಾಗ ಅನೇಕರು ಇವನನ್ನು ಕಂಡು ತಾತ್ಸಾರ ವಾಗಿ ಮಾತನಾಡಿದರು. ಬಗೆಬಗೆಯಾದ ಹಿಂಸೆಗಳನ್ನು ಕೊಟ್ಟರು. ಇಷ್ಟಾ ದರೂ ಮಹಾವೀರನು ತನ್ನ ಕಠೋರವ್ರತವನ್ನು ಕೈಬಿಡಲಿಲ್ಲ. ಮಹಾವೀರನು ಹೀಗೆ ಎಲ್ಲೆಲ್ಲೂ ಅಲೆದಲೆದು, ತನ್ನ ನಲವತ್ತೆರಡನೆಯ ವರ್ಷದಲ್ಲಿ ಜೃಂಭಿಕ ಗ್ರಾಮಕ್ಕೆ ಬಂದನು. ಅಲ್ಲಿಯ ಋಜುಪಾಲಿಕಾ ನದಿಯ ದಡದಲ್ಲಿದ್ದ ಶಾಲ ವೃಕ್ಷದ ಕೆಳಗೆ ಕುಳಿತು, ಮಹಾವೀರನು ಧ್ಯಾನಾಸಕ್ತನಾಗಿ ಕಡೆಗೆ ಕೇವಲ ಜ್ಞಾನವನ್ನು ಸಂಪಾದಿಸಿಯೇ ಬಿಟ್ಟನು. ಅಂದಿನಿಂದ ಜಿನಸ್ವಾಮಿಗೆ ಅನಂತ ದರ್ಶನ, ಅನಂತಜ್ಞಾನ, ಅನಂತವೀರ್ಯ ಮತ್ತು ಅನಂತ ಸುಖಗಳೆಂಬ ನಾಲ್ಕು ವಿಧ ಸಿದ್ಧಿಗಳು ಲಬ್ಧವಾದವು. ಆಗ ಎಲ್ಲೆಲ್ಲೂ ಮಂಗಳವಾಯಿತು. ದೇವೇಂದ್ರನು ತನ್ನ ದಿವ್ಯ ಜ್ಞಾನದಿಂದ ಮಹಾವೀರನಿಗಾದ ಸಿದ್ಧಿಯನ್ನರಿತು, ಸಮಸ್ತ ದೇವತೆಗಳೊಡನೆ ಅಲ್ಲಿಗೆ ಬಂದು ಸಹಸ್ರಾರು ನಾಮಗಳಿಂದ ಸ್ವಾಮಿ ಯನ್ನು ಸ್ತೋತ್ರ ಮಾಡಿದನು. ಸ್ವಾಮಿಗಾದ ಜ್ಞಾನೋತ್ಪತ್ತಿಯ ಪ್ರಭಾವ ದಿಂದ ಅನೇಕ ದಿವ್ಯ ವಸ್ತುಗಳು ಕೂಡ ಆತನಿಗೆ ಲಬ್ಧವಾದವು. ಮಹಾವೀರನು ಏಕಕಾಲದಲ್ಲಿ ಪ್ರಪಂಚದ ಎಲ್ಲ ವಿಚಾರಗಳನ್ನೂ ತಿಳಿಯುವ ಸಾಮರ್ಥ್ಯವುಳ್ಳ ಈ ಕೇವಲ ಜ್ಞಾನವೆಂಬ ಸರ್ವೋತ್ಕೃಷ್ಟವಾದ ತಿಳುವಳಿಕೆಯನ್ನು ಪಡೆದನು. ಇಂತಹ ಕಲ್ಯಾಣೋತ್ಸವವನ್ನು ಕಂಡು ಸಂತೋಷಪಟ್ಟ ದೇವತೆಗಳು ಮಹಾ ವೀರನನ್ನು ಜಿನ, ಅರ್ಹತ, ಅರಿಹಂತ ಎಂಬೀ ನಾನಾವಿಧ ಬಿರುದುಗಳಿಂದ ಹೊಗಳಿ ತಮ್ಮ ಸ್ವಸ್ಥಾನಕ್ಕೆ ತೆರಳಿದರು.

ಜೈನರಲ್ಲಿ ಸರ್ವಜ್ಞರಾದವರನ್ನು 'ಕೇವಲಿ' ಎಂದು ವ್ಯವಹರಿಸುವರು.

ವರ್ಧಮಾನನು ಕೇವಲಿಯಾದ ಮೇಲೆ ಬೋಧನೆಗೆ ತೊಡಗಿದನು. ಈತನು ಜನಗಳಿಗೆ ಧರ್ಮೋಪದೇಶ ಮಾಡಿದ ಸಂಗತಿಗಳಲ್ಲಿ, ಅಹಿಂಸಾ ವ್ರತ, ಅಸತ್ಯ ತ್ಯಾಗ ವ್ರತ, ಅಸ್ತೇಯ ವ್ರತ, ಬ್ರಹ್ಮಚರ್ಯ ವ್ರತ ಮತ್ತು ಅಪರಿಗ್ರಹ ವ್ರತ ಗಳೆಂಬ ಐದು ವಿಷಯಗಳು ಸರ್ವಮಾನ್ಯಗಳಾಗಿವೆ ಶರೀರದಿಂದಲೂ ಮಾತಿ ನಿಂದಲೂ ಮತ್ತು ಮನಸ್ಸಿನಿಂದಲೂ ಪ್ರಾಣಿಗಳಿಗೆ ನೋವುಂಟುಮಾಡದಿರು ವುದು ಅಹಿಂಸಾ ವ್ರತವೆನಿಸುವುದು. ಅಹಿಂಸಾ ಪರಮೋಧರ್ಮಃ" ಎಂಬೀ ಪ್ರಮುಖ ಜೈನ ಸಿದ್ಧಾಂತವು ಇತರ ಮತ ತತ್ವಗಳಲ್ಲಡಗಿರುವುದಾದರೂ, ಎಲ್ಲರೂ ಇದರ ಆಚರಣೆಗೆ ಗಮನಕೊಡುವುದರಿಂದ ಲೋಕ ಕಲ್ಯಾಣವಾಗು ವುದರಲ್ಲಿ ಸಂಶಯವಿಲ್ಲ. ಸತ್ಯವಾದ ಮಾತನ್ನು ಪ್ರಿಯವಾಗಿಯೂ ಹಿತ ವಾಗಿಯೂ ಹೇಳುವ ರೀತಿಯು ಅಸತ್ಯ ತ್ಯಾಗವು. ಕಳ್ಳತನ ಮಾಡದಿರು ವುದೂ ಇತರರ ಸ್ವತ್ತಿಗೆ ಆಸೆಪಡದಿರುವುದೂ ಅಸ್ತೇಯವು. ಸ್ತ್ರೀಸಂಗತ್ಯಾಗ, ಇಂದ್ರಿಯ ನಿಗ್ರಹಾದಿ ಸಂಗತಿಗಳು ಬ್ರಹ್ಮಚರ್ಯಕ್ಕೆ ಸೇರಿದಂಶಗಳು. ಯಾವ ವಿಷಯದಲ್ಲೂ ಆಸೆಯನ್ನು ಮಾಡದಿರುವ ವ್ರತಕ್ಕೆ ಅಪರಿಗ್ರಹವೆನಿಸಲ್ಪಡು ವುದು. ನಿರಾಶೆಯು ಪರಮ ಸುಖಕ್ಕೆ ಕಾರಣವಾಗುವುದು. ಅಂತಹ ಸ್ಥಿತಿಯು ಸಂನ್ಯಾಸಿಗಳಿಗೆ ಸಾಧ್ಯ. ಕರ್ಮನಾಶವಾಗಿ ಪುನರ್ಜನ್ಮವು ತಪ್ಪುವುದು ಇವೇ ಮೊದಲಾಗಿ ಮಹಾವೀರನು ಬೋಧಿಸಿರುವನು. ಹೀಗಿರು ವವರಿಗೆ–ಇದರಂತೆಯೇ ಜಿನ ಸ್ವಾಮಿಯು ಹಲವಾರು ತತ್ವಗಳನ್ನೂ ಮೋಕ್ಷೋ ಪಾಯವನ್ನೂ ತಿಳಿಯಪಡಿಸಿರುವನು. ಈತನು ಮೂವತ್ತು ವರ್ಷ ಕಾಲ ಉತ್ತರ ಭಾರತದಲ್ಲೆಲ್ಲಾ ಸಂಚರಿಸಿ ಜೈನ ಮತವನ್ನು ಪ್ರಚಾರ ಮಾಡಿದನು.

ಮಹಾವೀರನ ಶಿಷ್ಯರಲ್ಲಿ ಇಂದುಭೂತಿ, ಸುಧರ್ಮರೇ ಮುಂತಾದ ಹನ್ನೊಂದು ಮಂದಿ ಪ್ರಮುಖ ಶಿಷ್ಯರಿದ್ದರು. ಇವರಿಗೆ ಗಣಧರರೆಂದು ಹೆಸರು. ಸರ್ವಜ್ಞನಾದ ಗುರುವು ಇವರಿಗೆ ಹದಿನಾಲ್ಕು ಗ್ರಂಥಗಳನ್ನು ಬೋಧಿಸಿದನು. ಈ ಗಣಧರರು ಮಹಾವೀರನ ವಾಣಿಯನ್ನು ಸಂಗ್ರಹಿಸಿ ಅಂಗ ಮತ್ತು ಉಪಾಂಗಗಳೆಂಬ ಶಾಸ್ತ್ರಗಳನ್ನು ನಿರ್ಮಿಸಿದರು.

ವರ್ಧಮಾನನ ಸಂಚಾರಕಾಲದಲ್ಲಿ ಆತನ ಶಿಷ್ಯರಾದ ಸಹಸ್ರಾರುಮಂದಿ ಸಾಧುಗಳೂ, ಸಾಧ್ವಿಯರೂ ಒಟ್ಟಿಗೆ ಸಂಚರಿಸುತ್ತಿದ್ದರು. ಆತನು ಬೋಧಿ ಸುತ್ತಿದ್ದ ಭಾಷೆಯು ಜನಸಾಮಾನ್ಯಕ್ಕೆ ತಿಳಿಯದಿದ್ದುದರಿಂದ ಗೌತಮ ಗಣ ಧರನೆಂಬ ಮುಖ್ಯ ಶಿಷ್ಯನು ಮಾಗಧಿ ಭಾಷೆಗೆ ತರ್ಜುಮೆಮಾಡಿ ತಿಳಿಸುತ್ತಿ

ದ್ದನು. ಅನೇಕ ರಾಜಾಧಿರಾಜರು ಜಿನಸ್ವಾಮಿಯ ಉಪದೇಶವನ್ನು ಪಡೆದು ಧನ್ಯರಾದರು. ಅವರ ಪೈಕಿ ಮಗಧರಾಜನಾದ ರಾವ ಶ್ರೇಣಿಕನು, ರಾಜಗೃಹಕ್ಕೆ ಗುರುವನ್ನು ಕರೆತಂದು ಸಹಸ್ರಾರು ಪ್ರಶ್ನೆಗಳನ್ನು ಕೇಳಿ ತೃಪ್ತನಾಗಿ ಜೈನಮತಸ್ಥನಾದನು.

ಮಹಾವೀರಸ್ವಾಮಿಯು ಜೈನಮತೋದ್ಧಾರಕ್ಕಾಗಿ ಸಾಧು-ಸಾಧ್ವಿ, ಶ್ರಾವಕ-ಶ್ರಾವಕಿಗಳೆಂಬ ತರಗತಿಗಳನ್ನು ಏರ್ಪಡಿಸಿ ಅವರಿಗೆ ತಕ್ಕ ನಿಬಂಧನೆಗಳನ್ನು ರಚಿಸಿದ್ದನು. ಸರ್ವಸಂಗತ್ಯಾಗಿಯಾದ ಪುರುಷನು ಸಾಧುವಾಗಿಯೂ, ಹಾಗೆಯೇ ವಿರಾಗಿ ಸ್ತ್ರೀಯು ಸಾಧ್ವಿಯಾಗಿಯೂ ಪ್ರತಿಜ್ಞೆತೊಟ್ಟು ಮಹಾವೀರಸಂಘದ ಬೆಂಬಲಿಗಳಾಗಿದ್ದರು. ಇದರಂತೆ ಬೇರೆಬೇರೆ ಮಟ್ಟದಲ್ಲಿ ಜ್ಞಾನಿಗಳಾದವರೂ ಸ್ವಾಮಿಯ ಜೈನಮತ ಪ್ರಚಾರ ಕಾರ್ಯದಲ್ಲಿ ನೆರವಾಗಿದ್ದರು.

ಮಹಾವೀರನ ಎಪ್ಪತ್ತೆರಡನೆಯ ವರ್ಷದಲ್ಲಿ ಬಿಹಾರಿನ ಪಾವಾಪುರಿಗೆ ಬಂದು ನೆಲಸಿದನು. ತನ್ನ ನಿರ್ಯಾಣ ಸಮಯವನ್ನು ಮೊದಲೇ ತಿಳಿದಿದ್ದ ಸ್ವಾಮಿಯು ಅನೇಕ ಧರ್ಮ ಪ್ರಸಂಗಗಳನ್ನು ಶಿಷ್ಯರಿಗೆ ಬೋಧಿಸಿ, ಮಹಾ ಸಮಾಧಿಸ್ಥನಾದನು. ಕಾರ್ತಿಕ ಬಹುಳ ಚತುರ್ದಶಿಯಾದ ಪ್ರಭಾತ ಸಮಯದಲ್ಲಿ ಕ್ರಿಸ್ತಪೂರ್ವ ೫೬೭ರಲ್ಲಿ ಮಹಾವೀರಸ್ವಾಮಿಯು ನಿರ್ವಾಣವನ್ನು ಹೊಂದಿದನು. ದೇವತೆಗಳು ಕೂಡ ನಿರ್ವಾಣ ಕಲ್ಯಾಣೋತ್ಸವವನ್ನು ನಡೆಸಿ ಹೋದರು. ಅಂದಿನ ನೆನಪಾಗಿಯೇ ದೀಪಾವಲಿಯನ್ನು ಜೈನಭಕ್ತರು ಇಂದಿಗೂ ವಿಜೃಂಭಣೆಯಿಂದ ಆಚರಿಸುವರು.

ಮಹಾವೀರನೂ ಗೌತಮ ಬುದ್ಧನೂ ಸಮಕಾಲೀನರು. ಇಬ್ಬರೂ ಅಕ್ಕಪಕ್ಕದ ಪ್ರಾಂತ್ಯಗಳ ಕ್ಷತ್ರಿಯ ಮನೆತನದವರು. ದೈವ ಸಂಕಲ್ಪದಂತೆ ಇಬ್ಬರೂ ವಿರಕ್ತರಾಗಿ ಲೋಕಕಲ್ಯಾಣಕ್ಕಾಗಿ ದುಡಿದು ವಿಖ್ಯಾತರಾಗಿರುವರು. ಬುದ್ಧನ ಜೀವಿತಕಾಲದಲ್ಲಿಯೇ ಮಹಾವೀರನ ನಿರ್ವಾಣೋತ್ಸವವು ನಡೆಯಿತೆಂಬುದನ್ನು ಅವರ ಕಾಲಗಳ ಆಧಾರದಿಂದ ತಿಳಿಯಬಹುದಾಗಿದೆ.

# ಭಗವಾನ್ ಬುದ್ಧದೇವ

ಸುಮಾರು ಎರಡು ಸಾವಿರದ ಐನೂರು ವರುಷಗಳ ಹಿಂದೆ ಕಪಿಲವಸ್ತು ವೆಂಬ ಪಟ್ಟಣದಲ್ಲಿ ಶುದ್ಧೋದನನೆಂಬ ರಾಜನು ಆಳುತ್ತಿದ್ದನು. ಈತನಿಗೆ ಮಾಯಾದೇವಿಯೆಂಬ ರಾಣಿಯಿದ್ದಳು. ಮಾಯಾದೇವಿಯು ಒಂದು ಹುಣ್ಣಿಮೆಯ ದಿವಸ, ಸುಖನಿದ್ರೆಮಾಡುತ್ತಿದ್ದಾಗ ದಿವ್ಯವಾದ ಕನಸನ್ನು ಕಂಡಳು. ಹಿಮಾಲಯದ ಬೆಳ್ಳಿಯ ಬೆಟ್ಟದಲ್ಲಿದ್ದ ಒಂದು ಚಿನ್ನದ ಮನೆಗೆ ತನ್ನನ್ನು ಅಪ್ಸರೆಯರು ಕರೆದುಕೊಂಡು ಹೋಗಿ ಮಲಗಿಸಿದಂತೆಯೂ, ಆಗ ಒಂದು ಬಿಳಿಯ ಆನೆಯು ತನ್ನ ಬಳಿಗೆ ಬಂದು ಹೊಟ್ಟೆಯನ್ನು ಪ್ರವೇಶಿಸಿ ದಂತೆಯೂ ಆಕೆಯು ಕನಸು ಕಂಡಳು. ಇದನ್ನು ರಾಜನಿಗೆ ತಿಳಿಸಲು ಶುದ್ಧೋದನನು ಅರಮನೆಯ ಜೋಯಿಸರನ್ನು ಕರೆಯಿಸಿ ಅದರ ಅರ್ಥವನ್ನು ಕೇಳಿದನು. ಅವರು ಆ ಕನಸಿನ ಪ್ರಕಾರ ಅವರಿಗೆ ಒಬ್ಬ ಸುಪುತ್ರನು ಜನಿ ಸುವನೆಂದೂ, ಅವನು ರಾಜನಾಗಿಯಾಗಲೀ ಅಥವಾ ಸಂನ್ಯಾಸಿಯಾಗಿ ಯಾಗಲೀ ಜಗದ್ವಿಖ್ಯಾತನಾಗುವನೆಂದೂ ತಿಳಿಸಿದರು.

ಹೀಗಿರಲು ಮಾಯಾದೇವಿಗೆ ನವಮಾಸಗಳು ತುಂಬಲಾಗಿ, ಆಕೆಯು ಹೆರಿಗೆಗೆ ತನ್ನ ತವರುಮನೆಗೆ ಹೋಗಬಯಸಿದಳು. ರಾಜನು ಅದರಂತೆ ಆಕೆಯನ್ನು ದಿವ್ಯವಾದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ದೇವದಹಕ್ಕೆ ಕಳುಹಿಸಿದನು. ದಾರಿಯಲ್ಲಿ ಲುಂಬಿಣಿಯೆಂಬ ವನವು ಸಿಕ್ಕಲು ರಾಣಿಯು, ಆ ವನ ಸೌಂದರ್ಯವನ್ನು ನೋಡಲು ಸ್ವಲ್ಪಕಾಲ ವಿಶ್ರಮಿಸಿಕೊಂಡಾಗ, ಅಲ್ಲಿಯೇ ಗಂಡು ಮಗುವನ್ನು ಪ್ರಸವಿಸಿದಳು. ಈ ದಿವ್ಯವಾದ ಮಗುವಿನೊಡನೆ ತಾಯಿಯು ರಾಜಧಾನಿಗೆ ಬಂದಮೇಲೆ ಬಹು ವಿಜೃಂಭಣೆಯಿಂದ ನಾಮ ಕರಣೋತ್ಸವವು ನಡೆಯಿತು. ಮಗುವಿಗೆ "ಸಿದ್ಧಾರ್ಥ" "ಅಸಂಗ" ಎಂಬ ಹೆಸರಿಟ್ಟು, ಮೂವತ್ತೆರಡು ಶುಭಲಕ್ಷಣಗಳಿರುವ ಈ ಮಗುವೇ ಮುಂದೆ ಬುದ್ಧ ನಾಗುವನೆಂದು ಹಿರಿಯರು ರಾಜನಿಗೆ ತಿಳಿಸಿದರು ಆದರೆ ಮಾಯಾದೇವಿ ತಾಯಿಯು ಪ್ರಸವವಾದ ಒಂದು ವಾರದಲ್ಲಿಯೇ ದೈವಾಧೀನಳಾದ ಕಾರಣ,

ಆಕೆಯ ಸೋದರಿಯಾದ ಪ್ರಜಾಪತೀದೇವಿಯೇ ತಾಯಿಯಂತೆ ಸಿದ್ಧಾರ್ಥ ನನ್ನು ಪಾಲಿಸುತ್ತಿದ್ದಳು.

ಶುದ್ಧೋದನನು ತನ್ನ ಮಗ ಸಂನ್ಯಾಸಿಯಾಗದಿರಲೆಂದು ಸಿದ್ಧಾರ್ಥನು ಸುಖವಾಗಿರುವುದಕ್ಕೆ ಬೇಕಾದುದೆಲ್ಲವನ್ನೂ ಒದಗಿಸಿಕೊಟ್ಟನು. ದುಃಖದ ಪರಿಚಯವೇ ಆಗದಂತೆ ಮಾಡಿ, ದಿವ್ಯವಾದ ಅರಮನೆಯಲ್ಲಿ ಸುಂದರ ವಸ್ತು ಗಳ ಮಧ್ಯದಲ್ಲಿ ತನ್ನ ಪ್ರೀತಿಯ ಪುತ್ರನನ್ನು ಬೆಳೆಸಿದನು. ಇಷ್ಟಾದರೂ ಕುಮಾರನು ಎಲ್ಲರ ಹಾಗೆ ಆಡಿಕೊಂಡಿರದೆ ಸದಾ ಏನೋ ಚಿಂತಿಸುತ್ತಿದ್ದನು.

ಬಾಲ್ಯದಿಂದಲೇ ಸಿದ್ಧಾರ್ಥನಲ್ಲಿ ಪ್ರಾಣಿದಯೆಯು ಎದ್ದು ಕಾಣುತ್ತಿತ್ತು, ತನ್ನ ದಾಯಾದಿಯಾದ ದೇವದತ್ತನು ಒಂದು ಹಂಸಪಕ್ಷಿಯನ್ನು ಬಾಣದಿಂದ ಹೊಡೆಯಲು, ಅದು ಇವನ ಕಾಲಬಳಿ ಬಿತ್ತು. ಆಗ ಕುಮಾರನು ಆ ಪಕ್ಷಿಗೆ ನೋವಾಗದಂತೆ ಬಾಣವನ್ನು ತೆಗೆದು ಆರೈಕೆಮಾಡಿ ಪ್ರಾಣವನ್ನುಳಿಸಲು, ಅದು ಸಂತೋಷದಿಂದ ಹಾರಿಹೋಯಿತು.

ಶುದ್ಧೋದನನು ತನ್ನ ಮಗನನ್ನು ವಿದ್ಯಾಭ್ಯಾಸಕ್ಕಾಗಿ ವಿಶ್ವಾಮಿತ್ರನೆಂಬ ಗುರುವಿನ ಬಳಿ ಬಿಟ್ಟನು. ಶಾಸ್ತ್ರಾಭ್ಯಾಸದ ಜೊತೆಗೆ ಕ್ಷತ್ರಿಯೋಚಿತವಾದ ಶಸ್ತ್ರಾಭ್ಯಾಸವನ್ನೂ ಕಲಿತನು. ಒಮ್ಮೆ ರಾಜನು ತನ್ನ ಮಗನನ್ನು ವಿಹಾ ರಾರ್ಥವಾಗಿ ಹೊರಗಡೆ ಕರೆದುಕೊಂಡು ಬಂದಿದ್ದಾಗ, ಸಿದ್ಧಾರ್ಥನು ನಾನಾ ಪ್ರಾಣಿಗಳ ಜೀವನ ವಿಧಾನಗಳನ್ನು ಕಂಡು, ಜಿಗುಪ್ಸೆಹೊಂದಿ, ಚಿಂತೆಗೀಡಾ ದನು. ಮಗನು ಪ್ರಾಪ್ತವಯಸ್ಕನಾಗಲು, ಶುದ್ಧೋದನನು ಅವನಿಗೆ ವಿವಾಹ ಮಾಡಿಬಿಟ್ಟರೆ, ಸಂನ್ಯಾಸಿಯಾಗುವ ಯೋಚನೆಯನ್ನು ಬಿಡುವನೆಂದು ಭಾವಿಸಿದನು. ಇದಕ್ಕಾಗಿ ರಾಜನು ಮೂರು ವಿಧಗಳಾದ ಅರಮನೆಗಳನ್ನು ಕಟ್ಟಿಸಿ ಅನೇಕ ದಾಸದಾಸಿಯರನ್ನಿಟ್ಟು, ತನ್ನ ಪುತ್ರನ ಮನಸ್ಸು ಸದಾ ಸಂತೋಷವಾಗಿರುವಂತಹ ಸುಂದರವಾದ ಏರ್ಪಾಡುಗಳನ್ನು ಮಾಡಿದ್ದನು. ಸುಂದರಿಯಾದ ಯಶೋಧರೆಯೆಂಬ ಕನ್ಯೆಯನ್ನು ತಂದು ಸಿದ್ಧಾರ್ಥನಿಗೆ ವಿವಾಹ ಮಾಡಿಸಿದನು. ಅನಂತರ ಹತ್ತು ವರ್ಷಗಳಕಾಲ ಕುಮಾರನು ಸುಖವಾಗಿ ಕಾಲಕಳೆದನು.

ಸಿದ್ಧಾರ್ಥನಿಗೆ ಇಪ್ಪತ್ತೊಂಭತ್ತು ವರ್ಷ ವಯಸ್ಸಾಗಿದ್ದಾಗ, ಒಮ್ಮೆ ಪಟ್ಟಣವನ್ನೆಲ್ಲಾ ಸುತ್ತಿಕೊಂಡು ಬರಲು ಹೊರಟನು. ಆಗ ಇವನ ತಂದೆಯು ಮುನ್ನೆಚ್ಚರಿಕೆಯನ್ನು ತೆಗೆದುಕೊಂಡು, ಪಟ್ಟಣವನ್ನೆಲ್ಲಾ ಶೃಂಗರಿಸುವಂತೆ

ರಾಜಾಜ್ಞೆಮಾಡಿ, ಕೇವಲ ಸುಂದರ ವಸ್ತುಗಳು ಮಾತ್ರ ಅವನ ಕಣ್ಣಿಗೆ ಬೀಳುವಂತೆ ಏರ್ಪಡಿಸಿದ್ದನು. ಆದರೆ ರಾಜಾಜ್ಞೆಗೂ ಮೀರಿದ ವಿಧಿನಿಯಮವು ದಂತೆ, ಬುದ್ಧನು ನಾನಾ ತೆರದ ಕಷ್ಟಜೀವಿಗಳನ್ನು ಕಣ್ಣಾರ ನೋಡ ಬೇಕಾಯಿತು.

ಕುಮಾರ ಸಿದ್ಧಾರ್ಥನು ಸಾರಥಿಯಾದ ಚೆನ್ನನೊಡನೆ ರಾಜಮಾರ್ಗ ದಲ್ಲಿ ಬರುತ್ತಿದ್ದಾಗ ಹಣ್ಣು ಹಣ್ಣು ಮುದುಕನೊಬ್ಬನು ಕಣ್ಣಿಗೆ ಬೀಳಲು ಚೆನ್ನನಿಂದ ಎಲ್ಲರಗತಿಯೂ ಹಾಗಾಗುವುದೆಂದು ತಿಳಿದು ಕೊರಗಿದನು. ಇನ್ನೊಮ್ಮೆ ಒಬ್ಬ ರೋಗಿಯನ್ನೂ, ಮತ್ತೊಮ್ಮೆ ಒಂದು ಹೆಣವನ್ನೂ ಅವನು ಕಂಡಮೇಲಂತೂ ಸಿದ್ಧಾರ್ಥನಿಗೆ ಈ ಜಗದ ಜೀವನದಲ್ಲಿ ಜಿಗುಪ್ಸೆಯುಂಟಾ ಯಿತು. ಕೆಲವು ದಿನಗಳು ಕಳೆದು ಹೋದವು ಕುಮಾರನು ಸದಾಕಾಲ ದಲ್ಲಿಯೂ ಈ ಪ್ರಪಂಚದ ದುಃಖನಿವಾರಣೆಯ ಬಗೆಯನ್ನು ಚಿಂತಿಸುವುದೇ ನಿತ್ಯ ವಿಧಿಯಾಯ್ತು. ಹೀಗಿರಲು ಮತ್ತೊಮ್ಮೆ ನಗರ ಸಂಚಾರ ಮಾಡು ತ್ತಿದ್ದ ಕಾಲದಲ್ಲಿ, ಒಬ್ಬ ತೇಜಸ್ವಿಯಾದ ಸಂನ್ಯಾಸಿಯನ್ನು ಕಂಡನು. ಅಂದಿ ನಿಂದ ಸಿದ್ಧಾರ್ಥನು ಸಂಸಾರವನ್ನು ಬಿಟ್ಟು ಸಂನ್ಯಾಸಿಯಾಗಿ ಶಾಂತಿಯನ್ನು ಪಡೆಯಬೇಕೆಂದು ಹವಣಿಸುತ್ತಲೇ ಇದ್ದನು.

ಸಿದ್ಧಾರ್ಥನು ತನ್ನ ತಂದೆಯಬಳಿ ತನ್ನ ಸಂಕಲ್ಪವನ್ನು ತಿಳಿಸಿದನು. ಶುದ್ಧೋದನನಿಗೆ ಜ್ಯೋತಿಷ್ಕರ ಭವಿಷ್ಯವು ನೆನಪಿಗೆ ಬಂದು ಭಯವಾಗಿ, ಮಗನಿಗೆ ಅನೇಕ ಬುದ್ಧಿವಾದಗಳನ್ನು ಹೇಳಿ, ಚಕ್ರವರ್ತಿಯ ಸೌಭಾಗ್ಯವನ್ನು ಬಿಟ್ಟು ಕದಲಬಾರದೆಂದು ತಿಳಿಸಿದನು. ತನ್ನ ಮಗನು ಪಟ್ಟಣವನ್ನು ಬಿಟ್ಟು ಎಲ್ಲಿಯೂ ಹೋಗದಿರಲೆಂದು ಬೇಕಾದ ಹಾಗೆ ಕಾವಲನ್ನಿಡಿಸಿದನು. ಹಣೆಯ ಬರಹವನ್ನು ಮೀರಲು ಯಾರಿಗೆ ತಾನೆ ಸಾಧ್ಯ ?

ಹೀಗಿರಲು ಸಿದ್ಧಾರ್ಥನಿಗೆ ಒಂದು ಗಂಡು ಮಗುವೂ ಆಯಿತು. ಅರ ಮನೆಯಲ್ಲಿ ನಾಮಕರಣೋತ್ಸವವನ್ನು ವೈಭವದಿಂದ ನೆರವೇರಿಸಿ, ಮಗುವಿಗೆ ಹಿರಿಯರು ರಾಹುಳನೆಂಬ ಹೆಸರಿಟ್ಟರು. ಕುಮಾರನು ಅರಮನೆಯ ಸಕಲ ಸಂತೋಷಗಳನ್ನು ತೊರೆದು, ಶಾಂತಿ ಸಾಧನೆಗಾಗಿ ಸಂನ್ಯಾಸ ತೆಗೆದುಕೊಳ್ಳುವ ತೀರ್ಮಾನಮಾಡಿ ಬಿಟ್ಟನು.

ಅರ್ಧರಾತ್ರಿಯ ಸಮಯದಲ್ಲಿ ಸಿದ್ಧಾರ್ಥನು ಮೆಲ್ಲಗೆದ್ದು, ತನ್ನ ಮಡದಿ ಯಶೋಧರೆಯನ್ನೂ ಮುದ್ದು ಕಂದನನ್ನೂ ಒಮ್ಮೆ ನೋಡಿ, ಎಲ್ಲರನ್ನೂ

ಬಿಟ್ಟು ಗಟ್ಟಿಮನಸ್ಸಿನಿಂದ ಗೃಹತ್ಯಾಗ ಮಾಡಿದನು. ಕೂಡಲೇ ತನ್ನ ಸಾರಥಿ ಯಾದ ಚೆನ್ನನನ್ನು ಕರೆದು ತನ್ನ ಆಜ್ಞೆಯಂತೆ ನಡೆಯಬೇಕೆಂದು ಕಟ್ಟಾಜ್ಞೆ ಮಾಡಿ ತನ್ನ ಕುದುರೆಯಾದ ಕಂಥಕನನ್ನು ತರಹೇಳಿದನು. ಕುಮಾರನು ಆ ಕುದುರೆಯನ್ನು ಹತ್ತಿ ಅವೇಳೆಯಲ್ಲಿ ನಗರದಾಚೆಯಿದ್ದ ವನಮಧ್ಯಕ್ಕೆ ಹೊರಟನು. ಚೆನ್ನನೂ ಬಹು ವ್ಯಸನದಿಂದ ಕುಮಾರನನ್ನು ಬಿಟ್ಟಿರಲಾರದೆ, ಅವನನ್ನು ಹಿಂಬಾಲಿಸಿದನು. ಅವರಿಬ್ಬರೂ ರಾತ್ರಿಯೆಲ್ಲಾ ಪ್ರಯಾಣಮಾಡಿ, ಅರುಣೋದಯವಾಗುವ ವೇಳೆಗೆ ಅನುವಮಾ ನದಿಯ ದಡಕ್ಕೆ ಬಂದರು. ಸಿದ್ಧಾರ್ಥನು ನದಿಯ ತೀರದಲ್ಲಿ ಕುದುರೆಯಿಂದಿಳಿದು, ರಾಜಯೋಗ್ಯವಾದ ತನ್ನ ಉಡಿಗೆ ತೊಡಿಗೆಗಳನ್ನೆಲ್ಲಾ ಚೆನ್ನನಿಗೆ ಕೊಟ್ಟನು. ಕತ್ತಿಯಿಂದ ತಲೆ ಕೂದಲನ್ನೆಲ್ಲಾ ತೆಗೆದುಹಾಕಿ ಸಂನ್ಯಾಸಿಗೆ ತಕ್ಕ ವೇಷವನ್ನು ಧರಿಸಿದನು. ಚೆನ್ನನನ್ನು ಅರಮನೆಗೆ ಹಿಂತಿರುಗಿ ಎಲ್ಲರನ್ನೂ ಸಮಾಧಾನಪಡಿಸಬೇಕೆಂತೆ ಹೇಳಿ, ಕಂಥಕದೊಂದಿಗೆ ಅವನನ್ನು ಹಿಂದಕ್ಕೆ ಕಳುಹಿಸಿಕೊಟ್ಟನು. ಮೂಕಪ್ರಾಣಿ ಯಾದ ಕಂಥಕನು ಸ್ವಾಮಿಯ ವಿಯೋಗ ದುಃಖವನ್ನು ಸಹಿಸಲಾರದೆ ಮಾರ್ಗ ಮಧ್ಯದಲ್ಲಿಯೇ ಮೃತಿಹೊಂದಿತು. ಚೆನ್ನನು ಕುಮಾರನ ಮಾತಿಗೆ ಕಟ್ಟು ಬಿದ್ದು, ಕೊರಗುತ್ತಾ ರಾಜಧಾನಿಗೆ ಮರಳಿದನು.

ಹೀಗೆ ಸಿದ್ಧಾರ್ಥನು ರಾಜತ್ಯಾಗ ಮಾಡಿ ಬಂದ ಮೇಲೆ ಮುಂದೆ ತನ್ನ ವಂಶದ ಹೆಸರಾದ '**ಗೌತಮ**' ಎಂಬ ನಾಮವನ್ನಿಟ್ಟು ಕೊಂಡನು. ಶಾಕ್ಯರು ತನ್ನನ್ನು ಎಲ್ಲಾದರೂ ಹುಡುಕಿ ಕರೆದುಕೊಂಡು ಹೋದಾರೆಂದು ತಿಳಿದು ಪರಿವ್ರಾಜಕ ಸಂನ್ಯಾಸಿಯಂತೆ ಊರಿಂದೂರಿಗೆ ಅಲೆಯುತ್ತಾ ಗಂಗೆ ಯನ್ನು ದಾಟಿ ರಾಜಗೃಹಕ್ಕೆ ಬಂದನು. ಅರಮನೆಯ ಮೃಷ್ಟಾನ್ನವನ್ನು ಬಿಟ್ಟು, ಭಿಕ್ಷೆಯ ಕದನ್ನಕ್ಕೆ ಕೈಯೊಡ್ಡಿ ಅದನ್ನೆ ಸ್ವೀಕರಿಸಿದನು. ರಾಜಗೃಹದ ಬಿಂಬಸಾರನು ಗೌತಮನ ತೇಜಸ್ಸಿಗೂ, ಅವನ ಮಾತು ಕತೆಗಳಿಗೂ ಮನಸೋತು ತನ್ನಲ್ಲಿಯೇ ಇರಬೇಕೆಂದೂ ಅವನಿಗೆ ತನ್ನ ಸಕಲೈಶ್ವರ್ಯಗಳನ್ನೊಪ್ಪಿ ಸುವುದಾಗಿಯೂ ಕೇಳಿಕೊಂಡನು. ಆದರೆ ಗೌತಮನು ಸಕಲವನ್ನೂ ತ್ಯಜಿಸಿದ ತನಗೆ ಬುದ್ಧ (ಜ್ಞಾನಿ) ನಾಗುವುದೊಂದೇ ಗುರಿಯೆಂದು ತಿಳಿಯ ಪಡಿಸಿದನು. ಕೆಲವು ಕಾಲದ ಮೇಲೆ ರಾಜಗೃಹದ ಪಕ್ಕದಲ್ಲಿದ್ದ ಗೃಧ್ರಕೂಟ ವೆಂಬ ಪರ್ವತದಲ್ಲಿ ತಪಸ್ಸು ಮಾಡುತ್ತ ಗೌತಮನು ಕಾಲವನ್ನು ನೂಕಿದನು. ಅಲ್ಲಿ ಬಿಂಬಿಸಾರನು ಮಾಡುತ್ತಿದ್ದ ಪ್ರಾಣಿವಧೆಯಿಂದ ಕೂಡಿದ ಯಜ್ಞವನ್ನು

ನಿಲ್ಲಿಸಿ, ಎಲ್ಲರಿಗೂ ಪ್ರಾಣದಯೆಯ ವಿಷಯವಾಗಿ ಮನಕರಗುವಂತೆ ಬೋಧಿಸಿದನು. ಇದರಿಂದ ಆ ರಾಜ್ಯದಲ್ಲಿ ಪಶುವಧೆಯು ನಿಂತು ಶಾಂತಿ ನೆಲೆಸಿತು. ಗೌತಮನು ರಾಜಗೃಹದಲ್ಲಿದ್ದಾಗ ಕೃಶಾ ಗೌತಮಿಯೆಂಬುವಳ ಮಗುವು ಹಾವು ಕಚ್ಚಿ ಸತ್ತುಹೋಯಿತು. ಆಗ ಅವಳು ಗೌತಮನ ಬಳಿಬಂದು ತನ್ನ ಮಗುವನ್ನು ಬದುಕಿಸಬೇಕೆಂದು ಪ್ರಾರ್ಥಿಸಿದಳು. ಆಗ ಅವನು ತನಗೆ ಯಾರೂ ಸಾಯದವರ ಮನೆಯಿಂದ ಕೊಂಚ ಸಾಸುವೆಯನ್ನು ತಂದು ಕೊಡುವಂತೆ ಆಕೆಗೆ ಸೂಚಿಸಿದನು. ಗೌತಮಿಯು ಮನೆಮನೆಗೂ ಅಲೆದು ಪ್ರಯತ್ನಿಸಿ ನಿರಾಶೆಯಿಂದ ಅವನ ಬಳಿಗೆ ಹಿಂದಿರುಗಿದಳು. ಆಗ ಗೌತಮನು ಮರಣಕ್ಕೆ ಎಲ್ಲರೂ ಅಧೀನರೆಂದೂ, ಹುಟ್ಟಿದವರಿಗೆ ಸಾವು ತಪ್ಪಿದ್ದಲ್ಲವೆಂದೂ ತಿಳಿಸಿ, ಆಕೆಯನ್ನು ಸಮಾಧಾನ ಪಡಿಸಿದನು.

ಅಲ್ಲಿಂದ ಮುಂದೆ ಗೌತಮನು ಜ್ಞಾನವನ್ನು ಸಂಪಾದಿಸುವ ಪ್ರಯತ್ನದಲ್ಲಿ ನಿರತನಾದನು. ಕೆಲವು ಕಾಲ ಆರಾಡ ಮತ್ತು ರುದ್ರಕರೆಂಬ ಗುರುಗಳ ಬಳಿಹೋಗಿ ಶಿಷ್ಯ ವೃತ್ತಿ ಮಾಡಿದನು. ಕಡೆಗೆ ಉರುವೇಲದ ಕಾಡಿಗೆ ಬಂದು ಏಕಾಂತದಲ್ಲಿದ್ದು ಗೌತಮನು ಕಠಿಣವಾದ ತಪಸ್ಸನ್ನು ಮಾಡತೊಡಗಿದನು. ಕ್ರಮವಾಗಿ ಆಹಾರವನ್ನು ಕಡಿಮೆ ಮಾಡಿ ಕೊನೆಗೆ ಏನನ್ನೂ ಮುಟ್ಟದೆ, ಮಳೆ ಬಿಸಲುಗಳಿಗೆ ಹೆದರದೆ ಧ್ಯಾನ ಮಗ್ನನಾಗುತ್ತಿದ್ದನು. ಹೀಗೆ ಆರು ವರ್ಷಗಳ ಕಾಲ ತಪೋನಿರತನಾಗಿದ್ದರೂ ಅದರಿಂದ ಅವನಿಗೆ ಏನೂ ಲಾಭವಾದಂತೆ ತೋರಲಿಲ್ಲ. ದೀರ್ಘೋಪವಾಸಗಳ ಪರಿಣಾಮವಾಗಿ ಗೌತಮನ ಶರೀರವು ಬರಿಯ ಅಸ್ಥಿಪಂಜರವಾಗಿ, ನಿಸ್ತ್ರಾಣ ಹೆಚ್ಚಾಯಿತು. ಒಂದು ದಿನ ಗೌತಮನು ಪ್ರಜ್ಞೆತಪ್ಪಿ ಬಿದ್ದಿದ್ದಾಗ ಕಾಡಿನಲ್ಲಿ ಹೋಗುತ್ತಿದ್ದ ದನಕಾಯುವ ಹುಡುಗನೊಬ್ಬನು ಕೊಟ್ಟ ಆಡಿನ ಹಾಲಿನಿಂದ ಚೇತರಿಸಿಕೊಂಡನು. ಆಗ ಗೌತಮನಿಗೆ ಇನ್ನು ಮೇಲೆ ದೇಹವನ್ನು ನಾಶವಾಗಲು ಬಿಡಬಾರದೆಂದೂ, ಜೀವನಕ್ಕೆ ಬೇಕಾಗುವಷ್ಟು ಆಹಾರವನ್ನು ತೆಗೆದುಕೊಳ್ಳಬೇಕೆಂದೂ ಮನಸ್ಸಾಯಿತು.

ಮಾರನೆಯ ದಿನ, ಅರಣೋದಯದ ಸಮಯದಲ್ಲಿ ಗೌತಮನು ಧ್ಯಾನಮಗ್ನನಾಗಿ ಕುಳಿತಿದ್ದಾಗ ಸುಜಾತೆಯೆಂಬುವಳು ದೈವಭಕ್ತಿಯಿಂದ ಸಮರ್ಪಿಸಿದ ಆಹಾರವನ್ನು ಸ್ವೀಕರಿಸಿದನು. ಸಂಜೆಯ ಹೊತ್ತಿಗೆ ಒಂದು ದೊಡ್ಡ ನ್ಯಗ್ರೋಧ ವೃಕ್ಷ (ಬೋಧಿ ವೃಕ್ಷ)ದ ಕೆಳಗೆ ಪೂರ್ವಾಭಿಮುಖವಾಗಿ ಕುಳಿತುಕೊಂಡು, ತಾನು ಜ್ಞಾನಿಯಾಗುವವರೆಗೂ ಅಲ್ಲಿಂದ ಮೇಲೇಳುವುದಿಲ್ಲವೆಂದು

ಸಂಕಲ್ಪಿಸಿ ಧ್ಯಾನಮಗ್ನನಾದನು. ಆಗ ತಪೋವಿಘ್ನಕ್ಕೆ ಮಾರನ ಆಕರ್ಷಣೆ ಗಳಿದ್ದವು; ಬಿರುಗಾಳಿ ಬೀಸಿತು; ಮಳೆ ಬಿದ್ದಿತು. ಆದರೂ ಗೌತಮನು ಯಾವುದಕ್ಕೂ ಹೆದರದೆ ತಪೋನಿರತನಾಗಿದ್ದನು. ಬೆಳಕು ಹರಿಯುವ ಹೊತ್ತಿಗೆ ಗೌತಮನಿಗೆ ದಿವ್ಯ ಜ್ಞಾನವು ಬಂದಿತ್ತು. ಆಗ ಬೋಧಿ ಸಿಕ್ಕಿತು. ಅಂದಿನಿಂದ ಗೌತಮನು ಬುದ್ಧನಾದನು.

ಬುದ್ಧನು ಬೋಧಿ ವೃಕ್ಷದ ಕೆಳಗೆ ಕುಳಿತು ಈ ಪ್ರಪಂಚದ ದುಃಖ ನಿವಾರಣೆಗೆ ಉಪಾಯವನ್ನು ಚಿಂತಿಸುತ್ತಿದ್ದನು. ಆಗ ಆತನಿಗೆ ಮೊದಲು ನಾಲ್ಕು ಸತ್ಯಗಳು ಹೊಳೆದವು. ಅದರಲ್ಲಿ ಮೊದಲನೆಯ ಸತ್ಯವು ಲೋಕ ದಲ್ಲಿ ದುಃಖವು ತುಂಬಿಕೊಂಡಿದೆಯೆನ್ನುವುದು. ದುಃಖಕ್ಕೆ ಕಾರಣ ವುಂಟೆಂಬುದು ಎರಡನೆಯದು. ಈ ದುಃಖವನ್ನು ಕೊನೆಗಾಣಿಸುವುದು ಸಾಧ್ಯವೆಂಬುದು ಮೂರನೆಯದು. ಇದರ ನಿವಾರಣೆಗೆ ದಾರಿಯುಂಟೆಂಬುದೇ ನಾಲ್ಕನೆಯ ಸತ್ಯವು. "ಜನನ ರೋಗ, ಮುಪ್ಪು, ಸಾವು ಇವುಗಳು ದುಃಖಗಳು. ನಮ್ಮಲ್ಲಿರುವ ಆಸೆಯು ನಿಂತಾಗ ಹುಟ್ಟುವುದೂ ನಿಲ್ಲುವುದು. ಆಸೆ ಹೋದರೆ ದುಃಖವು ತಾನಾಗಿ ಹೋಗುವುದಾದ ಕಾರಣ, ಮನಸ್ಸನ್ನು ನಾವು ಶುದ್ಧವಾಗಿಟ್ಟುಕೊಳ್ಳಬೇಕು. ಇದಕ್ಕೆ ಸುಲಭವಾದ ಮಾರ್ಗವುಂಟು. ಯಾವ ವಿಧವಾದ ಕೆಡಕನ್ನೂ ಯೋಚಿಸಬಾರದು, ಆಡಬಾರದು ಮತ್ತು ಮಾಡಲೂ ಬಾರದು. ಇದರಿಂದ ಆಶೆಯು ನಾಶವಾಗಿ ದುಃಖವು ಮಾಯ ವಾಗುವುದು" —ಹೀಗೆಂಬುದೇ ಬುದ್ಧನ ತತ್ವಗಳ ಸಾರಾಂಶವು.

ಹೀಗೆ ಬುದ್ಧನು ಜ್ಞಾನಿಯಾದ ಮೇಲೆ ಏಳುವಾರಗಳವರೆಗೆ ಅಲ್ಲಿಯೇ ಇದ್ದನು. ಮುಂದೆ ತಾನು ಕಂಡ ಧರ್ಮವನ್ನು ಜಗತ್ತಿಗೆ ಉಪದೇಶ ಮಾಡ ಬೇಕೆಂದು ಸಂಕಲ್ಪಿಸಿದನು. ಮೊದಲು ಮೃಗದಾವವೆಂಬ ವನದಲ್ಲಿದ್ದ ಐವರು ಸಂನ್ಯಾಸಿಗಳಿಗೆ ಬುದ್ಧನು ಧರ್ಮೋಪದೇಶ ಮಾಡಿದನು. ಅವರೆಲ್ಲರೂ ಆನಂದಭರಿತರಾಗಿ ಬುದ್ಧನ ಶಿಷ್ಯರಾದರು. ಬೌದ್ಧ ಸಂನ್ಯಾಸಿಗಳು 'ಭಿಕ್ಷು' ಗಳೆಂಬ ಹೆಸರಿನಿಂದ ಕರೆಯಲ್ಪಡುವರು. ಇವರ ಕೂಟಕ್ಕೆ 'ಸಂಘ' ಎಂದು ಹೆಸರು. ಮೂರು ತಿಂಗಳ ವೇಳೆಗೆ ಸಂಘದಲ್ಲಿ ಅರವತ್ತು ಮಂದಿ ಭಿಕ್ಷು ಗಳಿದ್ದರು. ಬುದ್ಧನು ಧರ್ಮ ಪ್ರಚಾರಕ್ಕಾಗಿ ಅವರೆಲ್ಲರನ್ನೂ ಬೇರೆ ಬೇರೆ ಕಳುಹಿಸಿ ತಾನು ಸೇನಾನಿ ಗ್ರಾಮಕ್ಕೆ ಹೋದನು.

ಬುದ್ಧನು ಸೇನಾನಿ ಗ್ರಾಮದಲ್ಲಿದ್ದಾಗ ಕಾಶ್ಯಪರೆಂಬ ಮೂವರು

ಸೋದರರೂ ಅವರ ಶಿಷ್ಯರೂ ಬುದ್ಧನ ಧರ್ಮಕ್ಕೆ ಮೆಚ್ಚಿ ಅವನ ಶಿಷ್ಯರಾದರು. ಅಲ್ಲಿಂದ ಬುದ್ಧನು ರಾಜಗೃಹಕ್ಕೆ ಬಂದನು. ಅಲ್ಲಿಯ ರಾಜನಾದ ಬಿಂಬ ಸಾರನು ಬುದ್ಧನನ್ನು ಭಕ್ತಿಯಿಂದ ಬರಮಾಡಿಕೊಂಡು ಸತ್ಕರಿಸಿ ಅವನ ಶಿಷ್ಯ ನಾದನು. ತನ್ನ ನಗರದ ಪಕ್ಕದಲ್ಲಿದ್ದ ವೇಣುವನವನ್ನು ಬುದ್ಧನಿಗೆ ಧಾರೆ ಯೆರೆದು ಕೊಡಲು ಅವನು ಅದನ್ನು ಸಂಘದ ಉಪಯೋಗಕ್ಕಾಗಿ ಸ್ವೀಕರಿ ಸಿದನು. ಬುದ್ಧನು ಮಳೆಗಾಲದಲ್ಲಿ ಮಾತ್ರ ಎಲ್ಲ ಶಿಷ್ಯರೊಡನೆ ಈ ತಪೋ ವನದಲ್ಲಿರುತ್ತಿದ್ದು ಮಿಕ್ಕಕಾಲದಲ್ಲಿ ಬೇರೆಬೇರೆ ಕಡೆ ಸಂಚಾರ ಮಾಡುತ್ತಿದ್ದನು. ವರ್ಷಾಕಾಲವು ಸಮೀಪವಾಗಲು ಬೇರೆ ಬೇರೆ ಕಡೆ ಹೋಗಿದ್ದ ಶಿಷ್ಯರೆಲ್ಲರೂ ಗುರುವಿನ ಬಳಿ ಬಂದು ಸೇರಿದರು. ಆ ಕಾಲದಲ್ಲಿ ಪ್ರಸಿದ್ಧ ವಿದ್ವಾಂಸರಾಗಿದ್ದ ಸಾರಿಪುತ್ರ ಮತ್ತು ಮೌದ್ಗಲ್ಯಾಯನರೆಂಬ ಇಬ್ಬರು ಬ್ರಾಹ್ಮಣರು ಬುದ್ಧನ ಉಪದೇಶಗಳಿಗೆ ಮನಸೋತು, ಭಿಕ್ಷುಗಳಾದರು.

ಇತ್ತ ಬುದ್ಧನು ವೇಣುವನದಲ್ಲಿರುವ ಸಂಗತಿಯು ಕಪಿಲವಸ್ತುವಿಗೆ ಮುಟ್ಟಿತು. ಶುದ್ಧೋದನಿಗೆ ತನ್ನ ಮಗ ಸಂನ್ಯಾಸಿಯಾದನೆಂಬ ನೋವು ಬಹಳವಾಗಿದ್ದಿತಾದರೂ, ಆತನು ಬುದ್ಧನಾದನೆಂದು ಕೇಳಿ ಸಂತೋಷ ವಾಯಿತು. ಯಶೋಧರೆಯು ತನ್ನ ಪತಿಗಾಗಿ ನಿತ್ಯವೂ ಕೊರಗಿ ಕೃಶ ಳಾಗಿದ್ದಳು. ಶಾಕ್ಯರಾಜನು ತನ್ನ ಮಗನನ್ನು ರಾಜಗೃಹಕ್ಕೆ ಕರೆತರು ವಂತೆ ಕೆಲವು ಮಂದಿ ಮಂತ್ರಿಗಳನ್ನು ಅವನ ಬಳಿ ಕಳಿಹಿಸಿದನು. ಅಲ್ಲಿಗೆ ಹೋದವರೆಲ್ಲಾ ಬುದ್ಧನ ಉಪದೇಶಗಳಿಂದ ಆಕರ್ಷಿತರಾಗಿ ಭಿಕ್ಷುಗಳಾಗಿ ಮರಳಿ ಬರುತ್ತಲೇ ಇರಲಿಲ್ಲ. ಕಡೆಯ ಬಾರಿ ಹೋದ ಕಾಲುದಾಯಿಯೆಂಬ ಮುಖ್ಯ ಮಂತ್ರಿಯೂ ಭಿಕ್ಷುವಾದರೂ, ರಾಜಾಜ್ಞೆಯನ್ನು ಮರೆಯದೆ, ಬುದ್ಧನನ್ನು ಕಪಿಲ ವಸ್ತುವಿಗೆ ಕರೆತಂದನು. ಆ ವೇಳೆಗೆ ಬುದ್ಧನು ತನ್ನ ಪಟ್ಟಣವನ್ನು ಬಿಟ್ಟು ಏಳು ವರ್ಷಗಳಾಗಿದ್ದವು. ಪಟ್ಟಣಿಗರೆಲ್ಲರೂ ಆನಂದ ಭರಿತರಾಗಿ ಬುದ್ಧನನ್ನು ಎದುರುಗೊಂಡು ಮಹಾ ತೇಜಸ್ವಿಯಾದ ಅವನನ್ನು ಕಂಡು ಸಂತೋಷಪಟ್ಟರು. ನಮಸ್ಕರಿಸಿದರು. ಮಹಾರಾಜನು ನನ್ನ ಪುತ್ರನು ಹೀಗೆ ಕಾವಿಯ ಬಟ್ಟೆಯುಟ್ಟು ಸಂನ್ಯಾಸಿಯಾದುದಕ್ಕೆ ಅವನಲ್ಲಿ ತನ್ನ ದುಃಖ ವನ್ನು ತೋಡಿಕೊಂಡನು. ತಂದೆಯನ್ನು ಸಮಾಧಾನ ಪಡಿಸಿದ ಮೇಲೆ ಬುದ್ಧನು ಯಶೋಧರೆಯನ್ನು ಕಾಣಬರಲು, ಆಕೆಯು ಪತಿಯ ಪಾದಗಳಲ್ಲಿ ಬಿದ್ದು ಬಿಕ್ಕಿ ಬಿಕ್ಕಿ ಅತ್ತಳು. ಪಕ್ಕದಲ್ಲೇ ನಿಂತಿದ್ದ ಮುದ್ದು ಕಂದ ರಾಹುಳ

ನನ್ನೂ, ಯಶೋಧರೆಯನ್ನೂ ಬುದ್ಧನು ಕರುಣೆಯಿಂದ ಮಾತನಾಡಿಸಿ ಅವರನ್ನು ಸಮಾಧಾನ ಪಡಿಸಿದನು. ಶುದ್ಧೋದನನಿಗೆ ತಿಳಿಯದಂತೆ ಮಗುವಾದ ರಾಹುಳನನ್ನೂ ಸಂಘಕ್ಕೆ ಸೇರಿಸಿಕೊಂಡನು. ರಾಜನ ದುಃಖವು ಇಮ್ಮಡಿ ಯಾಯಿತು. ಆ ಪಟ್ಟಣದಲ್ಲಿದ್ದಾಗ ಅನೇಕ ರಾಜಮನೆತನದವರೂ ಮತ್ತು ಪಟ್ಟಣಿಗರು ಬುದ್ಧನ ಶಿಷ್ಯರಾದರು. ಆನಂದನೆಂಬ ಬುದ್ಧನ ದಾಯಾದಿಯು ನೆಚ್ಚಿನ ಶಿಷ್ಯರಲ್ಲೊಬ್ಬನಾಗಿದ್ದನು. ಅನಂತರ ಬುದ್ಧನು ರಾಜಧಾನಿಯನ್ನು ಬಿಟ್ಟಮೇಲೆ ಸೀತವನದಲ್ಲಿ ನಿಂತನು. ಶ್ರಾವಸ್ಥಿಯ ಅನಾಥ ಪಿಂಡಕನೆಂಬ ವ್ಯಾಪಾರಿಯು ಜೇತನೆಂಬ ರಾಜಕುಮಾರನಿಂದ ಸೊಗಸಾದ ವನವೊಂದನ್ನು ಕ್ರಯಕ್ಕೆ ತೆಗೆದುಕೊಂಡು ಬುದ್ಧನಿಗೆ ಅದನ್ನು ದಾನಮಾಡಿದನು. ಭಿಕ್ಷುಗಳ ವಾಸಕ್ಕಾಗಿ ವಿಶ್ರಾಮ ಗೃಹಗಳನ್ನೂ, ಎಲ್ಲರೂ ಸಭೆ ಸೇರುವುದಕ್ಕೆ ತಕ್ಕ ದಿವ್ಯ ವಾದ ಮಂದಿರವನ್ನೂ ಕಟ್ಟಿಸಿಕೊಟ್ಟನು. ಈ ಕಟ್ಟಡಗಳಿಗೆ ವಿಹಾರಗಳೆಂದು ಹೆಸರು. ಈ ಜೇತವನವು ಬುದ್ಧನಿಗೆ ಬಹಳ ಪ್ರಿಯವಾಗಿತ್ತು. ಇದರಂತೆಯೇ ಅನೇಕ ವಿಹಾರಗಳು ಬುದ್ಧನಿಗೆ ಇತರರಿಂದಲೂ ದಾನವಾಗಿ ಬಂದುವು. ಭಿಕ್ಷು ಗಳು ಮಳೆಗಾಲದಲ್ಲಿ ಮಾತ್ರ ವಿಹಾರಗಳಲ್ಲಿ ನಿಂತು, ಮಿಕ್ಕ ಸಮಯಗಳಲ್ಲಿ ಧರ್ಮೋಪದೇಶಕ್ಕಾಗಿ ಅನೇಕ ಕಡೆ ಸಂಚರಿಸಿ ಬರುತ್ತಿದ್ದರು. ಹೀಗೆ ನಲವತ್ತೈದು ವರ್ಷಗಳ ಕಾಲ ಬುದ್ಧನು ತತ್ವೋಪದೇಶದಲ್ಲಿ ನಿರತನಾಗಿದ್ದನು.

ತಂದೆಯಾದ ಶುದ್ಧೋದನ ರಾಯನಿಗೆ ಅವಸಾನ ಕಾಲವು ಸಮೀಪಿ ಸಲು, ಬುದ್ಧನು ಕಪಿಲ ವಸ್ತುವಿಗೆ ಮತ್ತೆ ಹೋಗಿ ಆತನಿಗೆ ಉಪದೇಶ ಮಾಡಲು, ರಾಜನು ಶಾಂತನಾಗಿ ಜೀವನ್ಮುಕ್ತನಾದನು. ಮಹಾ ಪ್ರಜಾ ಪತಿಯು ಭಿಕ್ಷುಣಿಯಾಗಿ ಸಂಘಕ್ಕೆ ಸೇರಿದಳು. ಮುಂದೆ ಯಶೋಧರೆಯೂ ಭಿಕ್ಷುಣಿಯಾಗಿ ಸಂಘಕ್ಕೆ ಸೇರಿದಳೆಂದು ಕೆಲವು ಗ್ರಂಥಗಳಿಂದ ತಿಳಿದು ಬರುತ್ತದೆ.

ಬುದ್ಧನು ಶ್ರಾವಸ್ತಿಗೆ ಬಂದ ನಂತರ ಬಿಂಬಿಸಾರನ ಪತ್ನಿಯಾದ ಕ್ಷೇಮಾ ದೇವಿಯೇ ಮೊದಲಾಗಿ ಅನೇಕ ಸ್ತ್ರೀಯರು ಭಿಕ್ಷುಣಿಯರಾದರು. ಬುದ್ಧನು ಪ್ರತಿಯೊಂದು ದಿನವೂ ಹೊತ್ತಿಗೆ ಮುಂಚೆಯೆದ್ದು ಸ್ನಾನಾದಿಗಳನ್ನು ಮುಗಿಸಿ ಎಲ್ಲ ಶಿಷ್ಯರಿಗೂ ಉಪದೇಶ ಮಾಡುತ್ತ, ಧರ್ಮ ಪ್ರಚಾರಕ್ಕಾಗಿ ಊರಿಂದೂರಿಗೆ ನಡೆದು ಹೋಗುತ್ತಿದ್ದನು. ಮಳೆಗಾಲಗಳಲ್ಲಿ ಮಾತ್ರ ಸಂಚಾರವನ್ನು ನಿಲ್ಲಿಸಿ ಯಾವುದಾದರೊಂದು ವಿಹಾರದಲ್ಲಿ ತಂಗುತ್ತಿದ್ದನು.

ಜೇತವನ, ಶಿಂಶುಮಾರಗಿರಿ, ಘೋಷಿತಾ ರಾಮ, ಘಾಲಿಕೆ, ವೇಣುವನ

ಮತ್ತು ಆಲವಿಗಳೆಂಬ ದಿವ್ಯ ಸ್ಥಳಗಳು ಬುದ್ಧನು ವರ್ಷ ಋತುವಿನಲ್ಲಿ ತಂಗು ತ್ತಿದ್ದ ವಿಹಾರ ಪ್ರದೇಶಗಳೆಂದು ಪ್ರಸಿದ್ಧಿ ಪಡೆದಿವೆ. ಬುದ್ಧನ ಪಾದಯಾತ್ರೆಯ ಸಮಯದಲ್ಲಿ ಬಗೆಬಗೆಯ ಜನಗಳಿಗೆ ಶಾಂತ ರೀತಿಯಿಂದ ಉಪದೇಶ ಮಾಡಲು ಅವರೆಲ್ಲರೂ ಬೌದ್ಧ ಧರ್ಮಿಗಳಾದರು. ಈ ಶಾಂತ ಮೂರ್ತಿಯನ್ನು ಕಂಡೊಡನೆಯೇ ದರ್ಪದಿಂದ ಮೆರೆಯುತ್ತಿದ್ದವರೂ ತಣ್ಣಗಾಗುತ್ತಿದ್ದರು. ಶಾಸ್ತ್ರ, ವೇತ್ತರೂ ಶರಣಾಗತರಾಗುತ್ತಿದ್ದರು. ಕಟು, ಕಟುಕರು ಕಳ್ಳರೂ ತಮ್ಮ ಕ್ರೌರ್ಯವನ್ನು ಬಿಟ್ಟು ಬೌದ್ಧರಾದರು. ಕೋಸಲದ ಬಳಿಯಲ್ಲಿದ್ದ ಅಂಗುಳಿ ಮಾಲನೆಂಬ ಕಳ್ಳನಿದ್ದ ಪ್ರದೇಶಕ್ಕೆ ಬುದ್ಧನು ನಿರ್ಭಯನಾಗಿ ಹೋದಾಗ ಅವನನ್ನು ಕೊಲ್ಲಲೆತ್ನಿಸಿದ ಕಳ್ಳನ ಮನಸ್ಸು ಕರಗಿ, ಕಡೆಗೆ ಅವನು ಭಿಕ್ಷುವಾದನು.

ಹೀಗೆ ಬುದ್ಧನ ಸಂಘವು ದಿನೇ ದಿನೇ ವೃದ್ಧಿಯಾಯಿತು. ಸಾವಿರಾರು ಭಿಕ್ಷುಗಳು ಸಂಘಕ್ಕೆ ಸೇರಿದುದನ್ನು ಕಂಡು, ಕೆಲವರು ಬುದ್ಧನ ಅಭ್ಯುದಯ ವನ್ನು ಸಹಿಸಲಾರದೆ ತೊಂದರೆ ಕೊಡಲೆತ್ನಿಸಿದರು. ಬುದ್ಧನು ಶಾಂತಿಯಿಂದಲೇ ಎಲ್ಲ ಅಪಾಯುಗಳಿಂದ ಪಾರಾದನು. ಬುದ್ಧನ ದಾಯಾದಿಯಾದ ದೇವ ದತ್ತನು ಭಿಕ್ಷುವಾಗಿ ಸಂಘಕ್ಕೆ ಸೇರಿಕೊಂಡು ತಾನೇ ಮುಖ್ಯಸ್ಥನಾಗಬೇಕೆಂದು ಬುದ್ಧನ ಮೇಲೆ ದ್ವೇಷ ಕಾರುತ್ತಾ ಬಂದನು. ದೇವದತ್ತನಿಗೆ ಬುದ್ಧನ ಮೇಲೆ ಬಾಲ್ಯದಿಂದಲೂ ವೈರವು ಬೇರೂರಿತ್ತು. ಇವನು ಬಿಂಬಿಸಾರನ ಮಗನಾದ ಅಜಾತ ಶತ್ರುವಿನೊಡನೆ ಸ್ನೇಹ ಮಾಡಬೇಕೆಂದು ಒಂದು ನೀಚಕೃತ್ಯವನ್ನೇ ಸಗಿದನು. ಆ ರಾಜಕುಮಾರ ಅಜಾತ ಶತ್ರುವು ಪಟ್ಟಕ್ಕೆ ಬರಲು ತನ್ನ ತಂದೆ ಯನ್ನೇ ಕೊಲ್ಲಲು ದೇವದತ್ತನ ದುರ್ಬೋಧೆಯೇ ಕಾರಣವಾಯಿತು. ದೇವ ದತ್ತನು ಅಜಾತ ಶತ್ರುವಿನ ಬೆಂಬಲದಿಂದ ಬುದ್ಧನನ್ನು ಕೊಲ್ಲಿಸುವ ಯೋಚನೆ ಮಾಡಿ, ಹದಿನಾರು ಮಂದಿ ಕಟುಕರನ್ನು ಆ ಪಾಪಕಾರ್ಯಕ್ಕೆ ನೇಮಿಸಿದನು. ಆದರೆ ಅವರೆಲ್ಲರೂ ಬುದ್ಧನ ಶಾಂತಸ್ವರೂಪವನ್ನೂ ತೇಜಸ್ಸನ್ನೂ ಕಂಡೊಡನೆ ಕತ್ತಿಗಳನ್ನು ಬಿಸಾಟು ತಮ್ಮ ಕೃತಿ ಆತನಿಗೆ ನಮಸ್ಕರಿಸಿ ಹಿಂದಿರುಗಿದರು.

ದೇವದತ್ತನು ತನ್ನ ಪ್ರಯತ್ನವು ವಿಫಲವಾದುದನ್ನು ಕಂಡು ಮತ್ತೊಮ್ಮೆ ತಾನೇ ಬುದ್ಧನ ಸಂಹಾರಕ್ಕೆ ಪ್ರಯತ್ನಿಸಿದನು. ಬುದ್ಧನು ಗೃಧ್ರಕೂಟ ಪರ್ವತ ದಡಿಯಲ್ಲಿ ಹೋಗುತ್ತಿದ್ದಾಗ ಅವನ ತಲೆಗೆ ಗುರಿಯಿಟ್ಟು ಒಂದು ಬಂಡೆ ಯನ್ನುರುಳಿಸಿದನು. ಆದರೆ ಆ ಬಂಡೆಯು ಗುರಿ ತಪ್ಪಿ ಚೂರುಚೂರಾಗಿ

ಬುದ್ಧನ ಕಾಲಿಗೆ ಮಾತ್ರ ಸ್ವಲ್ಪ ಚೂರು ತಗುಲಿ ಗಾಯವಾಯಿತು. ಭಿಕ್ಷು ಗಳೆಲ್ಲರೂ ಗುರುವಿನ ಕ್ಷೇಮಕ್ಕಾಗಿ ಪೇಚಾಡಿ, ದೇವದತ್ತನನ್ನು ದೂರಿದರು. ಆ ನೀಚನು ಅಷ್ಟಕ್ಕೇ ಬಿಡದೆ, ಅಜಾತ ಶತ್ರುವಿನ ಬಳಿಯಿದ್ದ ಮಾಲಾಗಿರಿ ಯೆಂಬ ಮದದಾನೆಗೆ ಮದ್ಯವನ್ನು ಕುಡಿಸಿ ಬುದ್ಧನು ಬರುವ ಮಾರ್ಗದಲ್ಲಿ ಓಡಿಸಿಬಿಟ್ಟನು. ಆಗ ಬುದ್ಧನು ಆನಂದನೇ ಮೊದಲಾದ ಹಲವರು ಭಿಕ್ಷುಗ ಳೊಡನೆ ದಾರಿಯಲ್ಲಿ ಬರುತ್ತಿದ್ದನು. ಆನಂದನೊಬ್ಬನು ಹೊರತು ಎಲ್ಲರೂ ಚದುರಿ ಓಡಿಹೋದರು. ಆದರೆ ಬುದ್ಧನು ಓಡಿಬರುತ್ತಿದ್ದ ಆನೆಯೆದುರಿಗೆ ಶಾಂತನಾಗಿಯೇ ನಿಂತುದ್ದನ್ನು ನೋಡಿ ರೋಷಭರಿತವಾದ ಆನೆಯು ಆ ಮಹಾತ್ಮನೆದುರಿಗೆ ಮಂಡಿಯೂರಿ ಆತನ ಪಾದಧೂಳಿಯನ್ನು ತನ್ನ ಮೇಲೆ ಎರಚಿಕೊಂಡು ತೆಪ್ಪನೆ ಗಜಶಾಲೆಗೆ ಮರಳಿತು. ಇಂತಹ ಅದ್ಭುತ ದೃಶ್ಯ ವನ್ನು ನೋಡಿದವರೆಲ್ಲರೂ ಬುದ್ಧನ ಗುಣಗಾನಮಾಡಿದರು. ವಿರೋಧಿಯಾದ ದೇವದತ್ತನಿಗೆ ಬುದ್ಧನ ದಿವ್ಯಶಕ್ತಿಯರಿವಾಯಿತಾದರೂ, ಸಂಘಶಕ್ತಿಯನ್ನಾ ದರೂ ಹಾಳುಮಾಡಿ ಬುದ್ಧನ ಹೆಸರನ್ನು ಕೆಡಿಸಬೇಕೆಂದು ಯೋಚಿಸಿದನು. ದೇವದತ್ತನು ಸಂಘದ ಭಿಕ್ಷುಗಳಲ್ಲಿ ಕೆಲವರನ್ನೆತ್ತಿಕಟ್ಟಿ ಅವರಿಗೆ ದುರಾಸೆ ತೋರಿಸಿ, ಐನೂರು ಮಂದಿ ಭಿಕ್ಷುಗಳೊಡನೆ ಅವನು ವಾರಣಾಸಿಗೆ ಬಂದು, ಒಂದು ಸಭೆ ಸೇರಿಸಿದನು. ಆ ಸಮಯದಲ್ಲಿ ಬುದ್ಧನ ಮುಖ್ಯ ಶಿಷ್ಯರಾದ ಸಾರಿ ಪುತ್ರನೂ ಮೌದ್ಗಲ್ಯಾಯನನೂ ಅವನ ಚರ್ಯೆಯ ಪರೀಕ್ಷೆಗಾಗಿ ಮಿತ್ರರಂತೆ ನಟಿಸಿ ಅಲ್ಲಿಗೆ ಹೋಗಿದ್ದರು. ದೇವದತ್ತನ ನಿದ್ರಾಸಮಯದಲ್ಲಿ ಇವರಿಬ್ಬರೂ ಮಾಡಿದ ಹಿತೋಪದೇಶದಿಂದ ಎಲ್ಲ ಬಿಕ್ಷುಗಳೂ ಬುದ್ಧನ ಬಳಿಗೆ ಹಿಂದಿರುಗಿ, ತಮ್ಮ ತಪ್ಪನ್ನು ಮನ್ನಿಸುವಂತೆ ಪ್ರಾರ್ಥಿಸಿಕೊಂಡರು. ಕಡೆಗೆ ದೇವದತ್ತನು ತನ್ನ ಪ್ರಯತ್ನಗಳೆಲ್ಲವೂ ವಿಫಲವಾದುದಕ್ಕೆ ಮನನೊಂದು, ವ್ಯಾಧಿಗ್ರಸ್ತನಾಗಿ ನರಳಿ ಪ್ರಾಣಬಿಟ್ಟನು. ಇತ್ತ ದೇವದತ್ತನ ದುಷ್ಟ ಸಹವಾಸವು ಹೋದ ಮೇಲೆ ಅಜಾತ ಶತ್ರುವಿಗೂ ತನ್ನ ಕೃತ್ಯದಲ್ಲಿ ಪಶ್ಚಾತ್ತಾಪವಾಗಿ, ಮನಶ್ಶಾಂತಿ ತಂದುಕೊಳ್ಳಲು ಆಮ್ರವನಕ್ಕೆ ಬಂದನು. ಆಗ ಪ್ರಶಾಂತವಾತಾವರಣದಲ್ಲಿ ಬುದ್ಧನು ದಿವ್ಯೋಪದೇಶಗಳನ್ನು ಮಾಡುತ್ತಿದ್ದನು. ಇದನ್ನು ಕೇಳಿ ರಾಜನಿಗೆ ಸದ್ಬುದ್ಧಿಯು ತಲೆದೋರಿ, ಬುದ್ಧನಿಗೂ ಮತ್ತು ಅವನ ಸಂಘಕ್ಕೂ ಶರಣಾದ ನಲ್ಲದೆ ತನ್ನ ತಂದೆಯನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಕೇಳಿ ಕೊಂಡನು. ಬುದ್ಧನು ಹಾಗೆ ಶರಣಾಗತನಾದವನನ್ನು ಕಂಡು ಮರುಗಿ,

ರಾಜನು ಹಾಗೆ ತನ್ನ ತಪ್ಪನ್ನು ಒಪ್ಪಿಕೊಂಡಮೇಲೆ ಮನಸ್ಸನ್ನು ಶಾಂತ ವಾಗಿಟ್ಟುಕೊಳ್ಳುವುದೇ ಪ್ರಾಯಶ್ಚಿತ್ತವೆಂದು ಹೇಳಿ, ಆತನನ್ನು ಸಮಾಧಾನ ದಿಂದ ಕಳುಹಿಸಿಕೊಟ್ಟನು. ಬುದ್ಧನ ಉಪದೇಶದಂತೆ ಅಜಾತಶತ್ರುವು ಶತ್ರುರಾಜ್ಯದ ಮೇಲೆ ಯುದ್ಧ ಮಾಡುವುದನ್ನು ಬಿಟ್ಟು, ಅಹಿಂಸಾಧರ್ಮಕ್ಕೆ ಶರಣಾದನು.

ಮುಂದೆ ಬುದ್ಧನು ರಾಜಗೃಹದಿಂದ ಹೊರಟು ನಲಂದ, ಪಾಟಲೀ ಗ್ರಾಮ, ಕೋಟಿಗ್ರಾಮಗಳೇ ಮೊದಲಾದ ಪ್ರದೇಶಗಳಲ್ಲಿ ಸಂಚಾರಮಾಡಿ, ಆಮ್ರಪಾಲಿಯೆಂಬ ವೇಶ್ಯೆಯಿಂದ ದತ್ತವಾಗಿದ್ದ ಆಮ್ರವನದಲ್ಲಿ ಕೆಲವುಕಾಲ ತಂಗಿದ್ದನು. ಅಲ್ಲಿಂದ ಬೆಳುವನ, ಕೂಟಾಗರ ಮತ್ತು ಪಾವದೇ ಮೊದಲಾದ ಪ್ರದೇಶಗಳಲ್ಲಿ ಸಂಚಾರಮಾಡಿ, ಅಲ್ಲಲ್ಲಿ ಧರ್ಮೋಪದೇಶ ಮಾಡುತ್ತಾ ಕಡೆಗೆ ಕುಶಿನಾರದ ಶಾಲವನದಲ್ಲಿಳಿದುಕೊಂಡನು. ಆವೇಳೆಗೆ ಬುದ್ಧನಿಗೆ ಎಪ್ಪತ್ತೊಂಭತ್ತು ವರ್ಷ ವಯಸ್ಸಾಗಿತ್ತು. ತನಗೆ ಅವಸಾನ ಸಮಯವು ಸನ್ನಿಹಿತವಾಗಿದೆಯೆಂದು ಆತನ ಅಂತರಾತ್ಮಕ್ಕೆನಿಸಿತು. ಒಂದು ಪೌರ್ಣಿಮೆಯ ದಿನ ಅಲ್ಲಿಯ ಶಾಲವೃಕ್ಷಗಳ ನಡುವೆ ಉತ್ತರದ ಕಡೆಗೆ ತಲೆಮಾಡಿಕ್ಕೊಂಡು ಮಲಗಿ, ತನ್ನ ಶಿಷ್ಯರನ್ನೆಲ್ಲಾ ಸಮೀಪಕ್ಕೆ ಬರುವಂತೆ ತಿಳಿಸಿ, ಅವರ ಸಂದೇಹ ಗಳನ್ನೆಲ್ಲಾ ಕೇಳುವಂತೆ ತಿಳಿಸಿ, ಎಲ್ಲಕ್ಕೂ ಕಡೆಯಬಾರಿ ಉತ್ತರವಿತ್ತು ಧರ್ಮೋಪದೇಶಮಾಡಿದನು. ಈ ವೇಳೆಗೆ ಸಾರಿಪುತ್ರ ಮೌದ್ಗಲ್ಯಾಯನರು ಸತ್ತುಹೋಗಿದ್ದರು. ಪ್ರಿಯಶಿಷ್ಯ ಆನಂದನು ತನ್ನ ಗುರುವು ಕಣ್ಮರೆಯಾಗುವ ನೆಂದು ತಿಳಿದು ಬಿಕ್ಕಿಬಿಕ್ಕಿ ಅಳತೊಡಗಿದನು. ಬುದ್ಧನಿಗೆ ಆಯಾಸವು ಹೆಚ್ಚಿದ್ದರೂ ಆನಂದನನ್ನು ಸಂತೈಸಿದನು. ಕಡೆಗೆ ಈ ಶಾಂತಮೂರ್ತಿಯು ಕ್ರಿ. ಪೂ. ೫೪೪ರ ವೈಶಾಖ ಶುದ್ಧ ಪೂರ್ಣಿಮಾ ದಿನದಲ್ಲಿ ಪರಂಧಾಮವನ್ನೈದಿದನು. ಇಲ್ಲಿಗೆ ಬುದ್ಧನು ಮಹಾಪರಿನಿರ್ವಾಣ ಹೊಂದಿ ಎರಡು ಸಾವಿರದ ಐನೂರು ವರ್ಷಗಳ ಮೇಲಾದರೂ ಆತನ ದಿವ್ಯವಾಣಿಯು ಎಂದೆಂದಿಗೂ ಸತ್ಯವಾಗಿದೆ.

ಬೌದ್ಧಧರ್ಮವು ಅಶೋಕಚಕ್ರವರ್ತಿಯು ಮಾಡಿದ ಪ್ರಚಾರ ಕಾರ್ಯ ಗಳಿಂದ ಏಷ್ಯಾಖಂಡದ ಬಹುಭಾಗದಲ್ಲಿ ಹರಡಿರುವುದು. ಈ ಧರ್ಮವು ಸತ್ಯ, ದಯೆ ಮತ್ತು ಸಮಭಾವಗಳ ಆಧಾರದ ಮೇಲೆ ಹುಟ್ಟಿರುವುದು. ಕಾರುಣ್ಯಮಯನಾದ ಬುದ್ಧನು ಲೋಕಕ್ಕೆ ಬೋಧಿಸಿರುವ ನೀತಿಯು ಸರ್ವ

ಗ್ರಾಹ್ಯವಾದವು. ಬುದ್ಧನ ಧರ್ಮಪದವೆಂಬ ಗ್ರಂಥದಲ್ಲಿ ಆತನ ದಿವ್ಯೋಪ ದೇಶಗಳು ಬಹಳವಾಗಿ ನಿರೂಪಿತವಾಗಿವೆ. ಅಲ್ಲಿಯ ಕೆಲವು ಅಮೃತವಾಣಿ ಗಳನ್ನು ಸರ್ವರ ಜ್ಞಾಪಕಕ್ಕೆ ಸೂಚಿಸಲಾಗಿದೆ.

"ಅಹಿಂಸೆಯೇ ಪರಮಧರ್ಮ. ಆಶೆಯನ್ನು ಬಿಟ್ಟಾಗಲೆ ಮಾನವನಿಗೆ ಮುಕ್ತಿ. ಪ್ರೀತಿಯಿಂದ ವೈರವು ಶಾಂತವಾಗುವುದೇ ಹೊರತು ವೈರದಿಂದಲ್ಲ. ಯಾರನ್ನೂ ಅನ್ಯಾಯವಾಗಿ ನೋಯಿಸಬಾರದು. ಪಾಪಕ್ಕೆ ಹೆದರಬೇಕು. ಯಾವ ಕಾರ್ಯವನ್ನಾಗಲೀ, ತಾನು ಮೊದಲು ಕಲಿತು ಇತರರಿಗೆ ತಿಳಿಸ ಬೇಕು."

"ಆರೋಗ್ಯವೇ ಪರಮಲಾಭ; ತೃಪ್ತಿಯೇ ಧನ; ವಿಶ್ವಾಸವೇ ಬಂಧು; ಶಾಂತಿಯೇ ಪರಮಸುಖ. ಕೋಪಬಂದಾಗ ಶಾಂತಿ ತಂದು ಕೊಳ್ಳಬೇಕು. ಚಾಡಿ ಹೇಳುವುದು ನೀಚತನ. ಜನ್ಮದಿಂದ ಯಾರೂ ಉತ್ತಮರಲ್ಲ. ತಂದೆ ತಾಯಿಗಳು, ಗುರುಹಿರಿಯರನ್ನು ಗೌರವದಿಂದ ಕಾಣ ಬೇಕು. ಧರ್ಮ ಮಾರ್ಗದಲ್ಲಿ ನಡೆಯುವವನೇ ಧನ್ಯನು."

ಭಗವಾನ್ ಬುದ್ಧದೇವನ ಅವತಾರವು ಮಹಾ ವಿಷ್ಣುವಿನ ದಶಾವತಾರ ಗಳಲ್ಲಿ ಒಂದಾಗಿರುವುದನ್ನು ಹಿಂದುಗಳೆಲ್ಲರೂ ನಂಬಿರುವರು. ಆತನ ದಿವ್ಯೋಪದೇಶಗಳನ್ನು ಮರೆಯದೆ, ಉತ್ತಮ ಮಾರ್ಗದಲ್ಲಿ ನಡೆಯ ಬೇಕಾದುದು ಎಲ್ಲರ ಕರ್ತವ್ಯವಾಗಿದೆ.

# ಮಹಾತ್ಮ ಏಸುಕ್ರಿಸ್ತ

ಏಷ್ಯಾಖಂಡದ ವಾಯುವ್ಯ ಭಾಗದಲ್ಲಿ ಪ್ಯಾಲಸ್ಟೈನ್ ಎಂಬ ದೇಶವಿದೆ. ಈ ದೇಶದಲ್ಲಿ ಹೆಚ್ಚಾಗಿ ಯಹೂದ್ಯರೆಂಬ ಪುರಾತನ ಮತಸ್ಥರು ವಾಸವಾಗಿರುವರು. ಹಿಂದೆ ಇವರನ್ನು ಇಸ್ರಯೇಲ್ಯರೆಂದು ಕರೆಯುತ್ತಿದ್ದರು. ಅಬ್ರಹಾಂ ಎಂಬಾತನು ಮೂಲಪುರುಷನಾಗಿದ್ದ ಈ ವಂಶದಲ್ಲಿ ಡೇವಿಡ್ ಎಂಬ ಪ್ರಸಿದ್ಧ ರಾಜನಿದ್ದನು. ಇವನ ತರುವಾಯ ಯಹೂದ್ಯರು ತಮ್ಮ ಅವಿವೇಕದಿಂದ ಸ್ವಾತಂತ್ರ್ಯವನ್ನು ಕಳೆದುಕೊಂಡು, ರೋಮ್ ರಾಜ್ಯಕ್ಕೆ ಅಧೀನವಾಗಿ ಬಹು ಕಷ್ಟನಷ್ಟಗಳನ್ನನುಭವಿಸಿದರು.

ಹೀಗೆ ರೋಮನ್ನರ ಆಳ್ವಿಕೆಗೆ ಒಳಪಟ್ಟ ಯಹೂದ್ಯರನ್ನು ಹೆರೋದನೆಂಬ ರಾಜನ ಆಳುತ್ತಿದ್ದನು. ಇವನು ತನ್ನ ಜನಗಳ ಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳದಿದ್ದುದರಿಂದ, ಅವರಿಗೆ ಸ್ವಲ್ಪವೂ ನೆಮ್ಮದಿಯಿರಲಿಲ್ಲ. ಇದೇ ವಂಶದಲ್ಲಿ ಹಿಂದೆ ಮೋಸಸ್ ಎಂಬ ಸಾಧು ಶ್ರೇಷ್ಠನು ಜನಿಸಿ, ಈಜಿಪ್ಟಿನವರ ಕೈಕೆಳಗೆ ಸಿಕ್ಕಿದ್ದ ಯಹೂದ್ಯರಿಗೆ ಸ್ವಾತಂತ್ರ್ಯ ಕೊಡಿಸಿದ್ದನು. ಆದರೆ ಮತ್ತೆ ಪರಾಧೀನತೆಯಿಂದ ತಪ್ಪಿಸಬಲ್ಲ ಯಾವನೊಬ್ಬ ಮಹಾತ್ಮನ ಜನನವು ಎಂದಿಗಾಗುವುದೋ ಎಂದು ಅವರು ಪರಿತಪಿಸುತ್ತಿದ್ದರು. ಅಂತಹ ಸಮಯದಲ್ಲಿ ಈಗ್ಗೆ ಇಪ್ಪತ್ತು ಶತಮಾನಗಳ ಹಿಂದೆ ಮಹಾತ್ಮ ಏಸುಕ್ರಿಸ್ತನು ಆ ದೇಶದಲ್ಲಿ ಅವತರಿಸಿದನು.

ಗ್ಯಾಲಿಲಿ ಪ್ರಾಂತಕ್ಕೆ ಸೇರಿದ ನಜರೇತಿನಲ್ಲಿ ಡೇವಿಡ್ ರಾಜ ಸಂತತಿಯಲ್ಲಿ ಜನಿಸಿದ ಜೋಸಫ್ ಎಂಬಾತನು ವಾಸವಾಗಿದ್ದನು. ಅರಸು ಮನೆತನದ ಜೋಸಫನು ಕಾರಣಾಂತರಗಳಿಂದ ಬಡಗಿಯ ಕೆಲಸವನ್ನು ಮಾಡಿಕೊಂಡು ಬಡತನದ ಜೀವನವನ್ನು ನಡೆಸುತ್ತಿದ್ದನು. ಈತನ ಮಡದಿಯಾದ ಮೇರಿಯ ಗರ್ಭದಲ್ಲಿ ದೈವಸಂಕಲ್ಪದಂತೆ ಏಸುವು ಮೈವೆತ್ತನು. ಏಸುವು ತಾಯಿಯ ಗರ್ಭದಲ್ಲಿದ್ದಾಗ ಮೇರಿಗೂ ಮತ್ತು ಆಕೆಯ ಪತಿ ಜೋಸಫನಿಗೂ ದಿವ್ಯವಾದ ಕನಸುಗಳಾದವು. ಅವರ ಸ್ವಪ್ನದಲ್ಲಿ ದೇವದೂತರು ಕಾಣಿಸಿ

ಕೊಂಡು, ಸತ್ಯ ಧರ್ಮಗಳ ಸ್ಥಾಪನೆಗಾಗಿ ಏಸುಸ್ವಾಮಿಯ ಅವತಾರವಾಗ ಲಿದೆಯೆಂದೂ, ಆತನಿಂದ ಆ ಜನಾಂಗದ ಕೀರ್ತಿ ಹೆಚ್ಚುವುದೆಂದೂ ತಿಳಿಸಿ ಮಾಯವಾದರು. ಈ ಶುಭ ಸಂಗತಿಯನ್ನು ಕೇಳಿದವರೆಲ್ಲರೂ ಸಂತೋಷ ಭರಿತರಾದರು.

ರೋಂ ದೇಶದ ಅಗಸ್ಟಸ್ ಪ್ರಭುವು ತನ್ನ ದೇಶದ ಜನಗಣತಿಯ ಸಮಯದಲ್ಲಿ ಪ್ರಜೆಗಳೆಲ್ಲರೂ, ಅವರವರ ಸ್ವಂತ ಸ್ಥಳದಲ್ಲಿರಬೇಕೆಂದು ಕಟ್ಟಾಜ್ಞೆ ಮಾಡಿದನು. ಅದರಂತೆ ಜೋಸೆಫನು, ಗರ್ಭಿಣಿಯಾಗಿದ್ದ ಮೇರಿಯೊಂದಿಗೆ ನಜರೇತಿನಿಂದ ಹೊರಟು ಜರೂಸಲೆಮ್ಮಿಗೆ ಸಮೀಪವಾಗಿದ್ದ ಬೆತ್ಲಹೆಂ ಗ್ರಾಮಕ್ಕೆ ಬಂದಿದ್ದನು. ಈ ಗ್ರಾಮವೇ ಡೇವಿಡ್ಡನ ಜನ್ಮಸ್ಥಳವಾಗಿತ್ತು. ಅಲ್ಲಿಗೆ ಹಲವಾರು ಕಡೆಗಳಿಂದ ಜನ ಗಣತಿಗಾಗಿಯೇ ಜನಗಳು ಬಂದಿಳಿದಿದ್ದರಿಂದ, ಈ ಬಡ ದಂಪತಿಗಳಿಗೆ ಎಲ್ಲಿಯೂ ಸ್ಥಳ ಸಿಕ್ಕದೆ ಅವರು ಒಂದು ದನದ ಕೊಟ್ಟಿಗೆಯಲ್ಲಿ ಇಳಿದುಕೊಂಡರು. ಆ ವೇಳೆಗೆ ಮೇರಿಗೆ ಪ್ರಸವವಾಗಲು, ಮೇರಿಯು ಆ ದಿವ್ಯವಾದ ಪುರುಷ ಶಿಶುವನ್ನು ದನದ ಗೋದಲಿಯಲ್ಲಿ ಮೊದಲು ಮಲಗಿಸಿದಳು.

ಈ ಮಗುವು ಜನನವಾದ ಸ್ವಲ್ಪಹೊತ್ತಿಗೆ ಅಲ್ಲಿಯ, ಕೆಲವು ಜನಕ್ಕೆ ಒಂದು ದಿವ್ಯ ಪ್ರಕಾಶವೂ ಕಾಣಿಸಿತು. ಅದರ ಮಧ್ಯದಿಂದ ದೇವದೂತ ನೊಬ್ಬನು ಬಂದು ಗೋದಲಿಯ ಶಿಶುವೇ ದೇಶ ರಕ್ಷಕನಾದ ಏಸುವೆಂದು ಸೂಚಿಸಿ ಅದೃಶ್ಯನಾದನು ಈ ದೃಶ್ಯವನ್ನು ಕಂಡವರೆಲ್ಲರೂ ಏಸುವಿನ ಜನ್ಮ ಸ್ಥಳಕ್ಕೆ ಬಂದು ತಾವು ಕಂಡ ಆಶ್ಚರ್ಯವನ್ನು ಆ ಸತಿಪತಿಗಳಿಗೂ ತಿಳಿಸಿ ಮುಂದೆ ಹೋದರು.

ದೇವದೂತನ ವಾಕ್ಯದಂತೆ ಜೋಸೆಫ್ ಮೇರಿಯರು ಮಗುವಿಗೆ ಏಸು ವೆಂದು ನಾಮಕರಣ ಮಾಡಿದರು. ಕೆಲವು ದಿನಗಳೊಳಗಾಗಿ ಮಗುವನ್ನು ಜರುಸಲೇಮ್ ಪಟ್ಟಣದ ದೇವಾಲಯಕ್ಕೆ ಕರೆದೊಯ್ದು, ದೇವರಿಗೊಪ್ಪಿಸುವ ವಿಧಿಯನ್ನು ನೆರವೇರಿಸಿದರು. ಆವೇಳೆಗೆ ಸೈಮೋನನೆಂಬ ದೈವ ಭಕ್ತನು ಅಲ್ಲಿಗೆ ಬಂದು ಲೋಕರಕ್ಷಕನಾದ ತಮ್ಮ ಸ್ವಾಮಿಯ ಜನನವಾಯಿತೆಂದು, ಏಸುವನ್ನು ನೋಡಿದ ತಕ್ಷಣ ಹಿಗ್ಗಿದನು.

ಆಗಿನ ಕಾಲದಲ್ಲಿ ಯಹೂದ್ಯರಂತೆಯೇ ಇತರರೂ ಲೋಕದಲ್ಲಿ ಮಹಾತ್ಮನೊಬ್ಬನು ಧರ್ಮರಕ್ಷಣೆಗಾಗಿ ಅವತರಿಸುವನೆಂದು ಜೋತಿಷ್ಕ

ರಿಂದ ತಿಳಿದುಕೊಂಡಿದ್ದರು. ಹೀಗೆ ಬೆತ್ಲಹೇಮಿನಲ್ಲಿ ಯಹೂದ್ಯರ ಪ್ರಭುವೊಬ್ಬನ ಜನನವಾಗಿದೆಯೆಂಬ ಸಂಗತಿಯು ಪ್ರವಾದಿಗಳ ಮೂಲಕ ಹೆರೂದ ರಾಜನ ಕಿವಿಗೆ ಮುಟ್ಟಿತು. ಆಗ ರಾಜನಿಗೆ ಯೋಚನೆಯಾಗಿ ಆ ಮಗುವನ್ನು ಕೊಲ್ಲಿಸಲು ಒಳಸಂಚು ನಡೆಯಿಸಿದನು. ಇತ್ತ ಜೋಸಫನ ಸ್ವಪ್ನದಲ್ಲಿ ದೇವದೂತನೊಬ್ಬನು ಕಾಣಿಸಿಕ್ಕೊಂಡು "ಹೆರೂದ ರಾಜನಿಂದ ನಿನ್ನ ಮಗುವಿಗೆ ಅಪಾಯವಾಗಬಹುದು. ನೀನು ಕೂಡಲೇ ಮಡದಿಯೊಂದಿಗೆ ಮಗನನ್ನು ಕರೆದುಕ್ಕೊಂಡು ಈಜಿಪ್ತಿಗೆ ಹೋಗು" ಎಂದು ಆಜ್ಞೆಮಾಡಿದಂತಾಯಿತು. ಆ ಮೇರೆಗೆ ತಕ್ಷಣವೇ ಜೋಸಫನು ಆ ದೇಶವನ್ನು ಬಿಟ್ಟನು.

ಇತ್ತ ಹೆರೂದನು ತನ್ನ ಪ್ರಾಂತದಲ್ಲಿದ್ದ ಎರಡು ವಯಸ್ಸಿನ ಕಂದಯ್ಯಗಳನ್ನೆಲ್ಲಾ ನಿಷ್ಕರುಣೆಯಿಂದ ಕೊಲ್ಲಿಸಿ ಘೋರವಾದ ಪಾಪಕಟ್ಟಿ ಕೊಂಡನು. ಈ ಕೃತ್ಯದಿಂದ ತನ್ನ ಪ್ರತಿಕಕ್ಷಿಯಾದ ಮಗುವು ಸತ್ತುಹೋಯಿತೆಂದೂ ಭಾವಿಸಿ ಸುಮ್ಮನಾದನು. ಕೆಲವು ಕಾಲಾನಂತರ ದುರುಳ ಹೆರೂದ ರಾಜನು ಸಾವನ್ನಪ್ಪಲಾಗಿ, ಜೋಸಫನ ಸ್ವಪ್ನದಲ್ಲಿ ದೇವದೂತನು ಮತ್ತೆ ಕಾಣಿಸಿಕ್ಕೊಂಡು ಇನ್ನು ಮೇಲೆ ಅವನು ತನ್ನ ಸ್ವದೇಶಕ್ಕೆ ಹೋಗಬಹುದೆಂದು ಹೇಳಿದಂತಾಯಿತು. ಕೂಡಲೇ ಜೋಸಫನು ಪ್ರಯಾಣ ಹೊರಟು ಬಂದು, ಬೆತ್ಲಹೇಮಿಗೆ ಹಿಂದಿರುಗಿ ಹೋಗಲು ಹೆದರಿ ನಜರೇತ್ ಎಂಬಲ್ಲಿಗೆ ನಡೆದು ಅಲ್ಲಿಯೇ ವಾಸವಾಗಿದ್ದನು.

ತಾಯಿತಂದೆಗಳ ಪೋಷಣೆಯಲ್ಲಿ ಏಸುವು ಬಹಳ ಮುದ್ದಾಗಿ ಬೆಳೆದನು; ಅವರಿಂದ ಅನೇಕ ನೀತಿಯ ಕಥೆಗಳನ್ನು ಕಲಿತನು. ಅತಿ ಶೀಘ್ರದಲ್ಲಿಯೇ ಬಾಲಕ ಏಸುವು ಒಳ್ಳೆಯ ದೈವಭಕ್ತನಾದನು. ಸಮ ವಯಸ್ಸಿನ ಇತರ ಬಾಲಕರು ಏಸುವನ್ನೇ ತಮ್ಮ ನಾಯಕನೆಂದು ತಿಳಿದು ಅವನಲ್ಲಿ ಬಹಳ ಭಯ ಭಕ್ತಿಗಳಿಂದ ನಡೆದುಕೊಳ್ಳತೊಡಗಿದರು. ಹೀಗೆ ಹನ್ನೆರಡು ವರ್ಷಗಳು ಕಳೆದವು. ಆ ವೇಳೆಗೆ ಏಸುವಿಗೆ ಅವರ ಮತ ಗ್ರಂಥಗಳ ಸಂಗತಿಗಳೆಲ್ಲವೂ ತಿಳಿದಿತ್ತು. ಒಮ್ಮೆ ಎಲ್ಲರೂ ಸೇರಿ ಪಸ್ಕಾ ಹಬ್ಬಕ್ಕೆ ಜರೂಸಲೆಮ್ಮಿಗೆ ಹೊರಟರು. ಅಲ್ಲಿ ಏಸುವು ತಮ್ಮವರ ಜೊತೆ ಬಿಟ್ಟು ಒಂದು ಪವಿತ್ರವಾದ ದೇವಾಲಯದ ಒಳಹೊಕ್ಕನು ಅಲ್ಲಿ ಅನೇಕ ಪಂಡಿತರು ಶಾಸ್ತ್ರ ಗೋಷ್ಠಿಯಲ್ಲಿ ಭಾಗವಹಿಸಿ ಧರ್ಮ ಸಂಗತಿಗಳನ್ನು ಚರ್ಚಿಸುತ್ತಿದ್ದರು. ಆಗ ಹನ್ನೆರಡು ವರ್ಷದ ಏಸುವು ಅವರ ಮಧ್ಯೆ ಬಾಯಿಹಾಕಿ ಭಾಷಣ ಮಾಡುತ್ತಿದ್ದನು.

ಬಾಲಕನನ್ನು ಹುಡುಕಿಕೊಂಡು ಬಂದ ತಂದೆ ತಾಯಿಗಳಿಗೆ ಈ ದೃಶ್ಯವನು ಕಂಡು ಆಶ್ಚರ್ಯದೊಡನೆ ಆನಂದವೂ ಹೆಚ್ಚಿತು.

ಜರುಸಲೇಮಿನಿಂದ ಬಂದ ತರುವಾಯ ಏಸುವು ಸುಮಾರು ಹದಿನೆಂಟು ವರ್ಷಕಾಲ ಅನೇಕ ಶಾಸ್ತ್ರಾರ್ಥಗಳನ್ನು ತಿಳಿದುಕೊಳ್ಳುವುದರಲ್ಲಿ ನಿರತನಾಗಿದ್ದನು. ಆಗಾಗ್ಗೆ ಹಲವುಕಡೆ ಸಂಚರಿಸಿ ಬಂದದ್ದುಂಟು. ಕೆಲವುಕಾಲವಾದ ಮೇಲೆ ತಂದೆಯು ಮೃತನಾಗಲು ತಾಯಿಯ ಪೋಷಣೆಯ ಭಾರವು ಬಿದ್ದುದರಿಂದ ಜೀವನ ಸೌಕರ್ಯಕ್ಕಾಗಿ ಈತನು ತನ್ನ ಕುಲವೃತ್ತಿಯನ್ನು ಕೈಗೊಂಡನು. ಆದರೆ ಈ ಸಂದರ್ಭದಲ್ಲಿ ಏಸುವಿನ ಪ್ರಾಯಕಾಲದ ಜೀವನ ವಿಧಾನದಬಗ್ಗೆ ಅಭಿಪ್ರಾಯ ಭೇದಗಳಿರುವುದರಿಂದ ಕ್ರೈಸ್ತಗ್ರಂಥಗಳಿಂದ ಯಾವುದೊಂದು ನಿಷ್ಕರ್ಷೆಯಾದ ಸಂಗತಿಯನ್ನೂ ಹೇಳುವಂತಿಲ್ಲ.

ಪ್ಯಾಲಸ್ಟೈನಿನ ಅರಣ್ಯದಲ್ಲಿ ಯೋಹಾನನೆಂಬ ಸಾಧುವು ವಾಸಿಸುತ್ತಿದ್ದನು. ಇವನು ಯಹೂದ್ಯರಲ್ಲಿ ಪ್ರಸಿದ್ಧನಾದ ಪ್ರವಾದಿಯು. ಆಗಾಗ್ಗೆ ಇವನು ಜನಗಳಬಳಿ ಬಂದು ಧರ್ಮರಕ್ಷಕನೊಬ್ಬನು ಇಷ್ಟರಲ್ಲಿಯೇ ಬರಲಿರುವನೆಂದು ತಿಳಿಸುತ್ತಿದ್ದನು. ಅಲ್ಲದೆ ಯೋರ್ದನ್ ನದಿಯ ನೀರಿನಿಂದ ಪಾಪ ಕರ್ಮಗಳಿಂದ ಪಶ್ಚಾತ್ತಾಪ ಪಡುತ್ತಿದ್ದವರಿಗೆ ಶುದ್ಧೀಕರಣದ ಬಾಹ್ಯವಿಧಿಯನ್ನು ಆಚರಿಸುತ್ತಿದ್ದನು. ಏಸುವು ಈ ಸಂಗತಿಯನ್ನು ತಿಳಿದು ಜ್ಞಾನಸ್ನಾನಕ್ಕಾಗಿ ತಾನೂ ಎಲ್ಲರಂತೆ ಹೊಳೆಯ ಬಳಿಗೆ ಬಂದನು. ಆದರೆ ಪಾಪರಹಿತನಾದ ಏಸುವು ಲೋಕದ ಪಾಪವನ್ನು ಪರಿಹರಿಸುವಂತೆ ದೇವರಲ್ಲಿ ಮೊರೆಯಿಟ್ಟು ಸ್ನಾನಮಾಡಿ ನಿಂತನು. ಪ್ರವಾದಿಗೆ ಈ ಮಾತುಕೇಳಿ ಸಂತೋಷವಾಯಿತು. ಆಗ ಅತ್ಯಾಶ್ಚರ್ಯಕರವಾದ ಸಂಗತಿಯು ನಡೆಯಿತು. ಅಂತರಿಕ್ಷದಿಂದ ದೇವರ ಆತ್ಮವು ಪಾರಿವಾಳ ರೂಪಿನಿಂದ ಇಳಿದುಬಂದು ಶುದ್ಧನಾದ ಏಸುವಿನ ಶರೀರವನ್ನು ಪ್ರವೇಶಮಾಡಿದಂತಾಯಿತು. ಆ ಸಂದರ್ಭದಲ್ಲಿ ಅಶರೀರವಾಣಿಯಾಗಿ "ನೀನೇ ನನ್ನ ಪ್ರಿಯಪುತ್ರನು. ನಿನಗೆ ನಾನು ಪ್ರಸನ್ನನಾಗಿದ್ದೇನೆ". ಎಂದು ಕೇಳಿಸಲು ಯೋಹಾನನು "ಏಸುವು ದೇವಕುಮಾರನು ಈತನೇ ಧರ್ಮರಕ್ಷಕನು" ಎಂದು ಎಲ್ಲರಿಗೂ ಸಾರಿ ಮುಂದೆ ಅವನಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು.

ಏಸುವು ಯೋರ್ದನ್ ನದಿಯಲ್ಲಿ ಸ್ನಾನಮಾಡಿ ಹೊರಕ್ಕೆ ಬಂದ ಮೇಲೆ, ಅಂತರಾತ್ಮ ಪ್ರೇರಣೆಯಿಂದ ಪಕ್ಕದ ದೊಡ್ಡ ಕಾನನಕ್ಕೆ ನಡೆದು

ಜ್ಞಾನಸಿದ್ಧಿಗಾಗಿ ಅಲ್ಲಿ ತಪಸ್ಸನ್ನು ಮಾಡಿದನು. ನಲವತ್ತು ದಿನಗಳ ಕಠಿಣ ವ್ರತವನ್ನಾಚರಿಸುತ್ತಾ, ನಿದ್ರಾಹಾರಗಳನ್ನು ತೊರೆದು ಧ್ಯಾನಮಗ್ನನಾಗಿದ್ದನು. ತಪಸ್ವಿಗಳನ್ನು ಕಾಮನು ಕೆಣಕುವುದು ಸ್ವಾಭಾವಿಕವಷ್ಟೆ. ಏಸುವು ಸೈತಾನನ ಆಕರ್ಷಣೆಗಳಿಗೀಡಾಗದೆ ದೃಢಬುದ್ಧಿಯಿಂದಿರಲು, ಪರಿಶುದ್ಧನಾದ ಏಸುವು ದಿವ್ಯ ಜ್ಞಾನವನ್ನು ಹೊಂದಿದನು. ಅನಂತರ ಏಸುವು ಪ್ರಚಾರ ಕಾರ್ಯಕ್ಕಾಗಿ ಸಂಚರಿಸತೊಡಗಿದನು.

ದೇವರನ್ನು ಭಕ್ತಿಯಿಂದ ಆರಾಧಿಸಬೇಕೆಂದು ಏಸುವು ಎಲ್ಲ ಜನರಿಗೂ ಬೋಧಿಸುತ್ತಾ ಬರಲು, ಆ ಪ್ರಾಂತದ ಶ್ರೀಮಂತರಾದ ಪುರೋಹಿತ ವರ್ಗದ ವರಿಗೆ ತಮ್ಮ ಹಣ ಸಂಪಾದನೆಯು ಅವನಿಂದ ನಿಂತುಹೋಗುವುದೆಂದು ಕೋಪ ಬಂದಿತು. ಏಸುವು ಶಾಂತಿಯಿಂದಲೇ ಅವರ ಅಧರ್ಮ ಮಾರ್ಗ ಗಳನ್ನು ಖಂಡಿಸಿ ಅವರಿಗೆ ಬುದ್ಧಿ ಕಲಿಸಿದನು. ಏಸುವು ಯೂಡಾಯ ಮತ್ತು ಸಮೇರಿಯೂ ಪ್ರಾಂತಗಳಲ್ಲೆಲ್ಲಾ ಸಂಚರಿಸಿ, ಒಂದು ವರ್ಷದ ನಂತರ ಮತ್ತೆ 'ಪಸ್ಕ' ಹಬ್ಬಕ್ಕೆ ಜರೂಸಲೇಮಿಗೆ ಬಂದನು. ಆ ವೇಳೆಗೆ ಅನೇಕರು ಏಸುವಿನ ಬೋಧನೆಯನ್ನು ಕೇಳಿ ಅವನ ಶಿಷ್ಯರಾದರು ಅನೇಕರು ಈ ಮಹಾತ್ಮನ ಯೋಗ ಶಕ್ತಿಯಿಂದ ಕುಷ್ಟರೋಗವೇ ಮೊದಲಾದ ನಾನಾವಿಧ ಖಾಯಿಲೆ ಗಳಿಂದ ಪಾರಾದರು. ಜರೂಸಲೇಮಿನಲ್ಲಿದ್ದಾಗ ಏಸುವು ಹನ್ನೆರಡು ಮಂದಿ ಮುಖ್ಯ ಶಿಷ್ಯರನ್ನು ಆರಿಸಿಕೊಂಡನು. ಇವರಿಗೆ ಅಪೋಸ್ತಲರೆಂದು ಹೆಸರಿಟ್ಟನು. ಏಸುವು ಅಲ್ಲಿಯ ಬೆಟ್ಟದ ಮೇಲಕ್ಕೆ ನಡೆದು ನೆರದಿದ್ದ ಅಸಂಖ್ಯಾತ ಜನರಿಗೆ ತಿಳಿಸಿದ ಬೋಧನೆಯನ್ನು ಕ್ರೈಸ್ತರು 'ಪರ್ವತ ಪ್ರಸಂಗ' ('ಸರ್ಮನ್ ಆನ್ ದಿ ಮೌಂಟ್'). ಎನ್ನುವರು. ಇವು ಬಹಳ ಅರ್ಥ ಗರ್ಭಿತಳಾಗಿವೆಯಲ್ಲದೆ, ಸರ್ವಧರ್ಮಗಳಲ್ಲೂ ಕಂಡು ಬರುವ ಉತ್ತಮ ನೀತಿ ಬೋಧಕಗಳಾಗಿವೆ.

ಪರ್ವತ ಪ್ರಸಂಗದಲ್ಲಿ ಏಸುಕ್ರಿಸ್ತನು ಮಾಡಿದ ಉಪದೇಶಗಳನ್ನು ಈ ರೀತಿ ಕ್ರೋಢೀಕರಿಸಿ ತಿಳಿಸಬಹುದಾಗಿದೆ.

"ಯಾರು ಅಹಂಕಾರವನ್ನು ಬಿಟ್ಟು ದೈನ್ಯದಿಂದ ದೇವರನ್ನು ಸೇವಿಸು ವರೋ ಅವರೇ ಧನ್ಯರು. ಇವರಂತೆಯೆ ಪಾಪಕ್ಕೆ ಪಶ್ಚಾತ್ತಾಪ ಪಡುವವರೂ, ಸಾಧು ಸ್ವಭಾವದವರೂ, ದಯಾಶೀಲರೂ, ಶಾಂತಿದೂತರೂ, ನಿರ್ಮಲ ಚಿತ್ತರೂ ಮತ್ತು ಸದಾಚಾರ ನಿಷ್ಠರೂ ಧನ್ಯರೇ ಸರಿ."

"ಎಲ್ಲರೂ ಪರಸ್ಪರ ಪ್ರೀತಿಸುವುದನ್ನು ಕಲಿಯಬೇಕು. ಸತ್ಯ ಧರ್ಮ ನ್ಯಾಯಗಳ ಪರಿಪಾಲನೆಗಾಗಿ ಯಾವಾಗ ಬೇಕಾದರೂ ಉಪವಾಸ ಮಾಡ ಬಹುದು. ಯಾರಲ್ಲಿಯೂ ದ್ವೇಷವಿಡಬಾರದು. ಶತ್ರುವನ್ನು ಕೂಡ ಪ್ರೀತಿಸ ಬೇಕು. ಪರಸ್ತ್ರೀಯನ್ನು ಸೋದರಿಯಂತೆ ತಿಳಿಯಬೇಕು: ಆತ್ಮಸಾಕ್ಷಿ ಯಾಗಿ ಕೆಲಸ ಮಾಡಬೇಕು".

"ಯಾರಿಗಾಗಲೀ ಮುಯ್ಯಿಗೆ ಮುಯ್ಯಿಯೆಂಬ ಭಾವನೆ ಬರಬಾರದು. ದ್ವೇಷಕ್ಕೆ ಪ್ರೀತಿಯೇ ಮದ್ದು. ಯಾರೇ ಆಗಲಿ ಹೊಟ್ಟೆ ಬಟ್ಟೆಗಳ ಚಿಂತೆಗಾಗಿ ಕೊರಗಬಾರದು. ದಯಾಮಯನಾದ ಭಗವಂತನ ಕರುಣೆಯನ್ನು ಮಾತ್ರ ಕೇಳಿಕೊಂಡರೆ ಸಾಕು; ಅವನೇ ನಮ್ಮ ಇಷ್ಟಾರ್ಥಗಳನ್ನು ಕೈಗೂಡಿಸುವನು."

"ದೈವ ಪ್ರಾರ್ಥನೆಯಲ್ಲಿ ಬಹಿರಾಡಂಬರವೂ ಪರರ ಬಲಾತ್ಕಾರವೂ, ನಟನೆಗಳೂ ಕೂಡದು. ಸರ್ವೇಶ್ವರನನ್ನು ನಿಜವಾದ ಭಕ್ತಿಯಿಂದ ಭಜಿಸ ಬೇಕು. ಬರಿಯ ಸ್ತೋತ್ರ ಪಾಠಗಳನ್ನು ಬಾಯಿತುಂಬ ಹೇಳಿದರೆ ಸಾಲದು. ದೇವರಲ್ಲಿ ನಂಬಿಕೆಯಿಟ್ಟು ಆತನಿಗೆ ಶರಣಾಗಬೇಕು"

ಮೇಲ್ಕಂಡ ರೀತಿಯ ಹಲವಾರು ಉಪದೇಶಗಳು ಕ್ರೈಸ್ತರ ಪವಿತ್ರ ಗ್ರಂಥವಾದ ಬೈಬಲ್ಲಿನಲ್ಲಿ ಹೃದಯಂಗಮವಾಗಿ ನಿರೂಪಿತವಾಗಿರುವುವು

ಏಸುವು ಪರ್ವತದಿಂದಿಳಿದು ಬಂದ ತರುವಾಯ ಅನೇಕ ರೋಗಪೀಡಿತ ರನ್ನು ತನ್ನ ದೃಷ್ಟಿ ಮತ್ತು ಸ್ಪರ್ಶಾದಿಗಳಿಂದಲೇ ಗುಣಪಡಿಸಿದನು. ಈತನು ಮಾಡಿದ ಅದ್ಭುತ ಕಾರ್ಯಗಳಿಗೆ ಹಲವಾರು ನಿದರ್ಶನಗಳು ಕ್ರೈಸ್ತ ಗ್ರಂಥ ಗಳಲ್ಲಿ ಹೇಳಲ್ಪಟ್ಟಿವೆ. ಒಮ್ಮೆ ಏಸುವು ಹಲವರೊಡನೆ ದೋಣಿಯೊಂದರಲ್ಲಿ ಪ್ರಯಾಣ ಮಾಡುತ್ತಿದ್ದಾಗ, ದೊಡ್ಡ ಬಿರುಗಾಳಿ ಬಂದುದರಿಂದ ಎಲ್ಲರೂ ಜಲಸಮಾಧಿಯಾಗುವುದರಲ್ಲಿದ್ದರು. ಆಗ ಎಲ್ಲ ಪ್ರಯಾಣಿಕರೂ ಆರ್ತ ನಾದ ಮಾಡಲು, ಭಗವಂತನನ್ನು ನಂಬುವಂತೆ ತಿಳಿಸಿ, ತಾನು ಧ್ಯಾನಮಗ್ನ ನಾಗಿರುತ್ತಾ ಎಲ್ಲರನ್ನೂ ರಕ್ಷಿಸಿದನು.

ಪಾಪಿಗಳ ರಕ್ಷಣೆಯ ವಿಚಾರದಲ್ಲಿಯೂ ಹಲವಾರು ವಿಚಿತ್ರ ಕಥೆಗಳು 'ಹೊಸ ಒಡಂಬಡಿಕೆ' ಗ್ರಂಥದಲ್ಲಿ ಸೂಚಿತವಾಗಿವೆ. ಮಹಾ ಪಾಪಿಯಾದ ವೇಶ್ಯೆಯೊಬ್ಬಳು ಏಸುವನ್ನು ಮರೆ ಹೊಗಲಾಗಿ, ಆಕೆಗೆ ಪಶ್ಚಾತ್ತಾಪ ವಾಗಿದೆಯೆಂದು ಕಂಡೊಡನೆಯೆ ಆಕೆಯ ಪಾಪಗಳನ್ನು ಮನ್ನಿಸಿದನು. ಇದಕ್ಕೆ

ಕೆಲವರು ಆಕ್ಷೇಪಿಸಲು, ದಯೆಯನ್ನು ತೋರಿಸುವುದೇ ಮುಖ್ಯ ಗುರಿಯೆಂದು ಆ ಸಂದರ್ಭದಲ್ಲಿ ಶಿಷ್ಯರಿಗೆ ಬೋಧಿಸಿದನು. "ಯಾರು ಅನನ್ಯ ಮನಸ್ಸಿನಿಂದ ನನ್ನನ್ನು ಭಜಿಸುವರೋ ಅವರನ್ನು ನಾನು ಕೈಬಿಡೆನು" ಎಂಬ ಭಗವಂತನ ವಾಣಿಯನ್ನೇ ಯೇಸುಕ್ರಿಸ್ತನೂ ತನ್ನ ಮಂದಿಗೆ ಬೋಧಿಸಿದನು. ಕ್ರಿಸ್ತನ ಬೋಧನೆಯ ತತ್ವಗಳು ಸಾಮಾನ್ಯವಾಗಿ ಕಂಡರೂ ಬಹಳ ಗೂಢಾರ್ಥವುಳ್ಳವುಗಳು " ಕ್ರಿಸ್ತನು ದೈವಕುಮಾರನು ; ಈತನೇ ಸ್ವರ್ಗ ಸಾಮ್ರಾಜ್ಯವನ್ನು ಸ್ಥಾಪಿಸುವನು" ಎಂಬ ಮಾತಿನ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳದೆ ಕೆಲವು ಯಹೂದ್ಯರು ಇವನನ್ನು ಧರ್ಮಶುಂಠನೆಂದು ಜರೆಯುತ್ತಾ, ಕೊಲ್ಲಲೆತ್ನಿಸಿದರಾದಕಾರಣ ಏಸುವು ಗ್ಯಾಲಿಲೀಯೆಂಬಲ್ಲಿ ವಾಸಮಾಡುತ್ತಿದ್ದನು. ತನ್ನ ಎಪ್ಪತ್ತು ಮಂದಿ ಶಿಷ್ಯರನ್ನು ಬೋಧನೆಗಾಗಿ ಏಸುವು ಹಲವುಕಡೆ ಕಳುಹಿಸಿದನು. ಕಡೆಗೆ ನಿರ್ಭಯದಿಂದ ತಾನು ಜರೂಸಲೇಮಿಗೆ ಬಂದು ಜನಗಳಿಗೆ ತತ್ವೋಪದೇಶ ಮಾಡುತ್ತಿದ್ದನು. ಕಡೆಯಬಾರಿ ಅಲ್ಲಿಯ ಜನಗಳು ಏಸುವನ್ನು ಆದರದಿಂದ ಸ್ವಾಗತಿಸಿದರು. ಆದರೆ ಅಲ್ಲಿಯ ಸನಾತನಿಗಳಿಗೆ ಏಸುವಿನ ಮೇಲೆ ಅಪಾರ ದ್ವೇಷವುಂಟಾಯಿತು. ಏಸುವು ಗುಡ್ಡದ ಮೇಲಕ್ಕೆ ಹೋಗಿ ರಾತ್ರಿಯ ಕಾಲದಲ್ಲಿ ದೇವರ ಧ್ಯಾನದಲ್ಲಿದ್ದಾಗ, ಜ್ಯೂಡಾಸ್ ಎಂಬ ದ್ರೋಹಿಯು ಅನೇಕ ಮಂದಿ ಅಧಿಕಾರಿಗಳನ್ನೂ, ಪೂರ್ವಾಚಾರವಾದಿಗಳನ್ನೂ ಕರೆದುಕೊಂಡು ಬಂದನು. ಏಸುಕ್ರಿಸ್ತನ ಹನ್ನೆರಡು ಜನ ಶಿಷ್ಯರ ಪೈಕಿ ಒಬ್ಬನಾಗಿದ್ದ ಈ ನೀಚ ಜ್ಯೂಡಾಸನು ಏಸುವಿನ ಸುಳಿವನ್ನು ಅವೇಳೆಯಲ್ಲಿ ಶತ್ರುಗಳಿಗೆ ತೋರಿಸಿಕೊಟ್ಟನು. ಆಗ ಅಧಿಕಾರಿಗಳು ಏಸುವನ್ನು ಹಿಡಿದುಕೊಂಡು, ಮೊದಲು ದೇವಾಲಯದ ಧರ್ಮಾಧಿಕಾರಿಯ ಬಳಿಗೆ ಕರೆತಂದರು. ಏಸುವು ದೈವದ್ರೋಹಿಯೆಂದು ತಪ್ಪು ಹೊರಿಸಿ, ಅವನಿಗೆ ಮರಣದಂಡನೆ ಕೊಡಬೇಕೆಂದು ಧರ್ಮಾಧಿಕಾರಿಗೆ ಸಲಹೆಕೊಟ್ಟರು. ಆದರೆ ಆ ಅಧಿಕಾರಿಯು ರೋಮನರ ಸರ್ವಾಧಿಕಾರಿಯಾದ ಪಿಲೇಟನ ಅಪ್ಪಣೆಮೇರೆಗೆ ನಡೆದುಕೊಳ್ಳಬೇಕೆಂದು, ಅಲ್ಲಿಗೆ ಕಳುಹಿಸಲು ಆತನು ಏಸುವು ನಿರ್ದೋಷಿಯೆಂದು ನ್ಯಾಯವಿತ್ತನು. ಈ ತೀರ್ಮಾನಕ್ಕೆ ಒಪ್ಪಿಕೊಳ್ಳದ ಆ ಕಟುಕರು ತಮ್ಮ ಧೊರೆಯಾದ ಹೆರೂದನೇ ವಿಚಾರಿಸಿ ಶಿಕ್ಷೆ ವಿಧಿಸಲೆಂದು ಏಸುವನ್ನು ಕರೆತರಲಾಗಿ, ಆವನು ಮತ್ತೆ ಪಿಲೇಟನು ಹೇಳಿದಂತೆ ನಡೆಯಬೇಕೆಂದು ಅವರನ್ನು ಹಿಂದಕ್ಕೆ ಕಳುಹಿಸಿದನು. ಎಲ್ಲರೂ

ಪ್ರತಿ ಪಿಲೇಟನ ಬಳಿ ಬಂದು ಏಸುವಿಗೆ ಶಿಕ್ಷೆ ವಿಧಿಸಬೇಕೆಂದು ಕೂಗಲಾರಂಭಿಸಿದರು. ಆಗಲೂ ಪಿಲೇಟನು ಏಸುವು ನಿರಪರಾಧಿಯೆಂದರೂ, ದೊಂಬಿಯೆದ್ದ ಜನರು ಏಸುವನ್ನು ಶೂಲಕ್ಕೇರಿಸಬೇಕೆಂದೇ ' ಹಠಹಿಡಿದರು. ಆಗ ಪಿಲೇಟನು ಆ ಮೂರ್ಖ ಜನರು ಆಕೃತ್ಯವನ್ನು ನಿಲ್ಲಿಸುವುದಿಲ್ಲವೆಂದು ಊಹಿಸಿ, ಅವರ ಇಷ್ಟಬಂದಂತೆ ಮಾಡಿಕೊಳ್ಳಬಹುದೆಂದೂ, ತನಗೆ ಆ ಪಾಪವು ಸೋಂಕದಿರಲೆಂದೂ ತಿಳಿಸಿ, ನೀರನ್ನು ತರಿಸಿ ಕೈತೊಳೆದುಕೊಂಡನು. ಶತ್ರುವರ್ಗದವರು ನಿರ್ದೋಷಿಯಾದ ಏಸುವಿನ ವಧೆಗೆ ಸಿದ್ಧರಾಗಿ ಅವನನ್ನು ಗೊಲ್ಗೊಥಾ ಎಂಬ ದಿಣ್ಣೆಯ ಭಾಗಕ್ಕೆ ಕರೆತಂದರು.

ಕೂಡಲೇ ಏಸುವಿಗೆ ಮುಳ್ಳಿನ ಕರೀಟವನ್ನು ತಂದಿಟ್ಟು ನಿಲುವಂಗಿಯನ್ನು ತೊಡಿಸಿ, ಭಾರವಾದ ಶಿಲುಬೆಯನ್ನು ಹೊರಿಸಿ ಗುಡ್ಡದ ಮೇಲ್ಗಡೆ ಗೊಯ್ದರು. ಅಲ್ಲಿ ಇಬ್ಬರ ಕಳ್ಳರ ಮಧ್ಯದಲ್ಲಿ ಏಸುವನ್ನು ನಿಲ್ಲಿಸಿ ಮೇಲ್ಗಡೆ "ನಜರೇತಿನ ಏಸು ಯಹೂದ್ಯರಾಜ" ಎಂಬ ಬರೆಹವುಳ್ಳ ಹಲಗೆಯನ್ನಿಟ್ಟರು. ಯಹೂದ್ಯ ಧೊರೆಗೆ ಶರಣೆಂದು ಅಣಕಿಸಿ ವಿಧವಿಧವಾಗಿ ಚೀತ್ಕಾರ ಮಾಡಿದರು. ಈ ದುಷ್ಟರ ಮಧ್ಯದಲ್ಲಿಯೂ ಅನೇಕ ಸಾಧುಗಳಿದ್ದು, ಇಂತಹ ಅನ್ಯಾಯವಾಗಬಾರದೆಂದು ಹಾಹಾಕಾರಪಟ್ಟರು. ರೋಮನ್ನರ ಅಧಿಕಾರಿಯಾದ ಪಿಲೇಟನಿಗೆ ಅಯ್ಯೋ ಎನಿಸಿತು. ಅವನು ಏಸುವನ್ನು ಬದುಕಿಸಲು ಮಾಡಿದ ಪ್ರಯತ್ನ ವಿಫಲವಾಯಿತೆಂದು ಬಹಳ ನೊಂದುಕೊಂಡು ತಲೆತಗ್ಗಿಸಿ ನಿಂತಿದ್ದನು. ಕಡೆಗೂ ಆ ದುರ್ಜನರು ಏಸುವನ್ನು ಶಿಲುಬೆಗೇರಿಸಿ, ಅವನ ಎರಡು ಕೈಗಳಿಗೂ, ಒಂದುಗೂಡಿಸಿದ ಪಾದಗಳಿಗೂ ಸೇರಿಸಿ ಮೊಳೆಗಳನ್ನು ಹೊಡೆದರು. ಅಂತಹ ಕಠೋರವಾದ ಬಾಧೆಯಲ್ಲಿಯೂ ಏಸುವು ಶಾಂತನಾಗಿದ್ದು ದೇವರನ್ನು ಕುರಿತು ಪ್ರಾರ್ಥಿಸಿದನು. "ಎಲೈ ದೇವರೇ, ತಾವು ಏನು ಮಾಡುವೆವೆಂಬುದನ್ನರಿಯದ ಈ ಅಜ್ಞಾನಿಗಳನ್ನು ಕ್ಷಮಿಸು" ಎಂದು ಏಸುವು ಕಡೆಯಬಾರಿ ಹೇಳಿ, ಕೊನೆಯುಸಿರು ಬಿಟ್ಟು ಕಣ್ಮುಚ್ಚಿದನು. ಆಗ ಎಲ್ಲೆಲ್ಲೂ ದುಶ್ಶಕುನಗಳಾದುದನ್ನು ಕಂಡು ಎಲ್ಲರೂ ನಡುಗಿದರು.

ಆ ದಿನ ಸಂಜೆ ಒಬ್ಬ ಧನಿಕನಾದ ಶಿಷ್ಯನು ಏಸುಕ್ರಿಸ್ತನ ದೇಹವನ್ನು ಅಧಿಕಾರಿಗಳಿಂದ ಬೇಡಿ ಪಡೆದನು, ಅವನು ಪಕ್ಕದಲ್ಲಿದ್ದ ಬಂಡೆಯನ್ನು ಕೊರೆದು ಒಂದು ಸಮಾಧಿಯನ್ನು ಏರ್ಪಡಿಸಿ ಅದರಲ್ಲಿ ಏಸುವಿನ ದೇಹವನ್ನಿಟ್ಟು, ಬಂಡೆಯನ್ನು ಮುಚ್ಚಿ ಹೋದನು. ಆದರೆ ಮಾರನೆಯ ದಿನ ಕೆಲವು ಭಕ್ತರು ದೇಹ

ವನ್ನು ನೋಡಲು ಬಂದಾಗ, ಒಳಗಿದ್ದ ಮೃತ ದೇಹವು ಮಾಯವಾಗಿದ್ದುದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಈ ಸಂಗತಿಯನ್ನು ಪಿಲೇಟನಿಗೆ ಅವರು ತಿಳಿಸಲು ಬಂದಾಗ, ಏಸುವು ಸಮಾಧಿಯಿಂದೆದ್ದು ಜೀವಂತ ನಾಗಿರುವುದಾಗಿ ದೇವದೂತನ ವಾಣಿಯು ಕೇಳಿಸಿತು. ಅದರಂತೆಯೇ ಏಸುವು ಕೆಲವು ಭಕ್ತರಿಗೆ ಆಮೇಲೆ ಪ್ರತ್ಯಕ್ಷನಾಗಿ ಉಪದೇಶ ಮಾಡಿದ್ದನ್ನು ಕೇಳಿ ಎಲ್ಲರೂ ಸಂತೋಷಪಟ್ಟರು. ಹೀಗೆ ಏಸುಕ್ರಿಸ್ತನು ತನ್ನ ಭಕ್ತರಿಗೆ ಪುನ ರ್ದರ್ಶನಕೊಟ್ಟ ದಿನದ ನೆನಪಾಗಿಯೇ ಕ್ರೈಸ್ತರು ಇಂದಿಗೂ 'ಈಸ್ಟರ್' ಹಬ್ಬ ವನ್ನು ವೈಭವದಿಂದ ಆಚರಿಸುತ್ತಾರೆ. ಹೀಗೆ ಮಹಾತ್ಮ ಏಸುಕ್ರಿಸ್ತನು ಭೂಲೋಕದಲ್ಲಿ ಧರ್ಮರಕ್ಷಣೆಗಾಗಿ ಅವತರಿಸಿ, ಕ್ರೈಸ್ತ ಮತತತ್ವವು ಎಲ್ಲೆಲ್ಲೂ ಹರಡಲು ಕಾರಣನಾದನು. ಧರ್ಮವೀರನಾದ ಏಸುಕ್ರಿಸ್ತನು ಮಾಡಿದ ಮಹಾತ್ಕಾರ್ಯಗಳೂ, ಹೇಳಿರುವ ಉಪದೇಶಗಳೂ ಬಹಳವಾಗಿವೆ. ಅವು ಗಳಲ್ಲಿ ಕೆಲವನ್ನು ಮಾತ್ರ ಈ ಕಥಾ ಭಾಗದಲ್ಲಿ ಸೂಚಿಸಲಾಗಿದೆ.

# ಪೈಗಂಬರ ಮಹಮ್ಮದ್

ಈಗ್ಗೆ ಸುಮಾರು ಹದಿನಾಲ್ಕು ಶತಮಾನಗಳ ಹಿಂದೆ ಅರಬ್ಬೀ ದೇಶದಲ್ಲಿ ಜನಿಸಿದ ಮಹಮ್ಮದನು ಇಸ್ಲಾಂಧರ್ಮ ಸ್ಥಾಪನೆಗೆ ಕಾರಣನಾದನು. ಕ್ರಿ.ಶ. ೫೭೦ರಲ್ಲಿ ಮಕ್ಕಾ ನಗರದಲ್ಲಿದ್ದ ಅಮೀನಳ ಗರ್ಭದಲ್ಲಿ ಮಹಮ್ಮದನು ಜನಿಸಿದನು. ಮಗುವಿನ ಜನನಕ್ಕೆ ಮೊದಲೇ ತಂದೆಯಾದ ಅಬ್ದುಲ್ಲಾನು ಕಾಲವಾಗಿದ್ದನು. ಮಹಮ್ಮದನ ಆರನೆಯ ವರ್ಷದಲ್ಲಿ ಅವನ ತಾಯಿಯೂ ಮೃತಳಾದಳು. ಹೀಗೆ ತಬ್ಬಲಿಯಾಗಿದ್ದ ಮಹಮ್ಮದನನ್ನು ಅವರ ತಾತನು ಸಾಕುತ್ತಿದ್ದಾಗ, ಮೂರು ವರ್ಷಗಳ ಮೇಲೆ ದೈವಕ್ಕೆ ಸ್ಮರಣೆಯಿಲ್ಲದೆಹೋಗಿ, ಅವನೂ ಕಣ್ಮರೆಯಾದನು. ಕಡೆಗೆ ಅವರ ಚಿಕ್ಕಪ್ಪನಾದ ಅಬೂತಾಲೀಬನ ಆಶ್ರಯದಲ್ಲಿ ಮಹಮ್ಮದನು ಬೆಳೆದು ಹಿರಿಯವನಾದನು.

ಮಹಮ್ಮದನು ಬಾಲ್ಯದಲ್ಲಿ ಹಿರಿಯರಿಂದ ತನ್ನ ದೇಶದ ಪುರಾತನ ಕಥೆಗಳನ್ನೂ, ವೀರರ ಚರಿತ್ರೆಗಳನ್ನೂ ಕೇಳಿ ತಿಳಿದುಕೊಂಡಿದ್ದನು. ಇದರಿಂದ ಅವನು ಒಳ್ಳೆಯ ವಿವೇಕ ಶಾಲಿಯಾಗಿ ಮುಂದುವರಿಯಲು ಸಾಧ್ಯವಾಯಿತು. ಮಹಮ್ಮದನು ತನ್ನ ದೂರದ ಸಂಬಂಧಿಯಾದ ಖದೀಜಳೆಂಬ ಶ್ರೀಮಂತಳ ವ್ಯವಹಾರವನ್ನು ಕೆಲವು ಕಾಲ ನೋಡಿಕೊಳ್ಳುತ್ತಿದ್ದನು. ಆಗ ಇವನಿಗೆ ಇಪ್ಪತ್ತೈದುವರ್ಷ ವಯಸ್ಸಾಗಿತ್ತು. ಖದೀಜಳು ಮಹಮ್ಮದನ ಪ್ರಾಮಾಣಿಕತೆಗೂ, ರೂಪಲಾವಣ್ಯಗಳಿಗೂ ಮನಸೋತು, ತಾನು ಹಿರಿಯವಳಾಗಿದ್ದರೂ ಬಡವನಾಗಿದ್ದ ಅವನನ್ನೇ ವರಿಸಿ ವಿವಾಹವಾದಳು. ಹೀಗೆ ಮಹಮ್ಮದನು ಖದೀಜಳನ್ನು ಕೈಹಿಡಿದಮೇಲೆ, ಅವನಿಗೆ ಮೂವರು ಪುತ್ರರೂ ಮತ್ತು ನಾಲ್ವರು ಪುತ್ರಿಯರೂ ಆದರು. ಆದರೆ ಗಂಡುಮಕ್ಕಳೆಲ್ಲಾ ಬಾಲ್ಯದಲ್ಲಿಯೇ ಸತ್ತುಹೋದರು.

ಖದೀಜಳು ಸಮಸ್ತೈಶ್ವರ್ಯವನ್ನೂ ಪತಿಯ ಪಾದಗಳಿಗೊಪ್ಪಿಸಿ, ಆತನ ಇಷ್ಟದಂತೆ ನಡೆಯುತ್ತಿದ್ದಳು. ಮಹಮ್ಮದನು ಬಡವನಾದ ತನ್ನ ಚಿಕ್ಕಪ್ಪ ಅಬೂತಾಲಿಬನ ಉಪಕಾರವನ್ನು ಸ್ಮರಿಸಿಕೊಂಡು, ತನ್ನ ಮಗಳಾದ ಫಾತಿಮ

ಳನ್ನು ಅವನ ಮಗನಿಗೆ ಕೊಟ್ಟು ಲಗ್ನ ಮಾಡಿದ್ದಲ್ಲದೆ, ಆತನಿಗೆ ವಿಶೇಷ ಧನ ಸಹಾಯವನ್ನೂ ಮಾಡಿದನು.

ಆಗಿನ ಕಾಲದಲ್ಲಿ ಅರಬ್ಬೀ ದೇಶದ ಜನರು ಬಹಳ ಮೂಢ ಸಂಪ್ರದಾಯ ಗಳನ್ನನುಸರಿಸುತ್ತಿದ್ದರು. ಮಕ್ಕಾ ನಗರದಲ್ಲಿದ್ದ ಒಂದು ದೇವಾಲಯದಲ್ಲಿ ಮುನ್ನೂರರವತ್ತು ವಿಗ್ರಹಗಳನಿಟ್ಟು, ಅವನ್ನು ದಿನಕ್ಕೊಂದರಂತೆ ಪೂಜಿಸು ತ್ತಿದ್ದರು. ಅಲ್ಲದೆ ವಿಗ್ರಹಗಳೇ ದೇವರೆಂದು ಭಾವಿಸಿದ್ದರು. ಅನೇಕರು ಭೋಗಲಾಲಸರಾಗಿ ದುರ್ವ್ಯಸನಗಳಿಗೀಡಾಗಿದ್ದರು. ಮಕ್ಕಾ ನಗರಕ್ಕೆ ಪರಸ್ಥಳ ದಿಂದ ಬಂದ ಯಾತ್ರಿಕರನ್ನು ಸುಲಿಗೆ ಮಾಡುವುದೇ ಕೆಲವು ಪುಂಡರ ಕಸು ಬಾಗಿತ್ತು. ಇಂತಹ ಕೆಟ್ಟ ನಡೆವಳಿಕೆಗಳನ್ನು ನಿಲ್ಲಿಸಲು ಸಂಕಲ್ಪಿಸಿ, ಮಹಮ್ಮದನು ಕ್ರಿ.ಶ. ೫೯೫ರಲ್ಲಿ ಒಂದು ಸಂಘವನ್ನು ಸ್ಥಾಪಿಸಿ, ಅವರ ಪುಂಡಾಟಗಳನ್ನು ನಿಲ್ಲಿಸಿದನು.

ಮಹಮ್ಮದನು ಜನಗಳನ್ನು ಸನ್ಮಾರ್ಗಕ್ಕೆ ತರುವ ಮಾರ್ಗವನ್ನು ಚಿಂತಿಸು ತ್ತಿದ್ದನು ಮಹಮ್ಮದನು ಪ್ರತಿನಿತ್ಯವೂ ತಪ್ಪದೆ ಸ್ವಲ್ಪಹೊತ್ತು ಧ್ಯಾನಾಸಕ್ತ ನಾಗಿ ಕುಳಿತುಕೊಳ್ಳುತ್ತಿದ್ದನು. ಒಂದು ದಿನ "ದೇವರ ಸಂಕೀರ್ತನೆಮಾಡು. ಅವನ ಸಂದೇಶವನ್ನು ಎಲ್ಲರಿಗೂ ತಿಳಿಸು" ಎಂಬ ಅಶರೀರ ವಾಣಿ ಅವನಿಗೆ ಕೇಳಿಸಿತು. ಅಂತಹ ಅನುಭವವನ್ನು ತಕ್ಷಣ ತನ್ನ ಪತ್ನಿಯಲ್ಲಿ ಹೇಳಿಕೊಂಡು ಭಾವ ಪರವಶನಾದನು. ಮತ್ತೊಮ್ಮೆ ಆ ದಿವ್ಯವಾಣಿಯನ್ನು ಕೇಳಲು ಕೆಲವು ದಿನಗಳ ಮೇಲೆ ಪ್ರಯತ್ನಿಸಿ ವಿಫಲನಾದನು. ಬಹಳ ಕಾಲ ದೈವಧ್ಯಾನ ಮಾಡಿದ ಮೇಲೆ ಕರ್ತವ್ಯ ಬೋಧೆಯಾಯಿತು. ಹೀಗೆ ಜ್ಞಾನಿಯಾದ ಮೇಲೆ ದೈವ ಸಂದೇಶವನ್ನು ಜನಗಳಿಗೆ ತಿಳಿಸಿ ಅವರ ಮೌಢ್ಯವನ್ನು ಹೋಗಲಾಡಿಸಲು ಸಂಕಲ್ಪಿಸಿದನು. ಮೊಟ್ಟಮೊದಲು ಮಹಮ್ಮದನ ಉಪದೇಶವನ್ನು ಕೇಳಿದ ಪೂರ್ವಾಚಾರಪರರು ಇವನನ್ನು ನಿಂದಿಸಿದರು. ಮತಬೋಧೆಯನ್ನು ನಿಲ್ಲಿಸಿದರೆ ಅವನನ್ನು ಮಕ್ಕಾ ನಗರದ ಧೊರೆಯಾಗಿ ಮಾಡುವುದಾಗಿ ಆಶೆದೋರಿಸಿದರು. ಆದರೆ ಈತನು ಯಾವ ಪ್ರಲೋಭನಕ್ಕೂ ಗುರಿಯಾಗದೆ ಮತ ಬೋಧೆ ಯಲ್ಲಿಯೇ ತೊಡಗಿದನು.

ಮಹಮ್ಮದನ ಬೋಧೆಯನ್ನು ನಂಬಿ, ಅವನ ಪತ್ನಿಯಾದ ಖದೀಜಳು ಮೊದಲ ಶಿಷ್ಯೆಯಾದಳು. ಆಲಿಯು ಎರಡನೆಯ ಶಿಷ್ಯನಾದನು. ಅನೇಕ ವಿಗ್ರಹಗಳನ್ನು ಪೂಜಿಸುತ್ತಿದ್ದ ಕೆಲವರು ಒಬ್ಬೊಬ್ಬರಾಗಿ ಇಸ್ಲಾಂ ಮತವನ್ನೂ

ಪ್ಪಿಕೊಂಡು ಮುಹಮ್ಮದನ ಶಿಷ್ಯರಾಗುತ್ತ ಬಂದರು. ಆದರೆ ಪ್ರಬಲರಾದ ಕೊರೈಷ್ ಮನೆತನದವರನೇಕರು ಮುಹಮ್ಮದನ ಶತ್ರುಗಳಾಗಿ, ಅವನಿಗೆ ಬಹಳ ಕಿರುಕುಳವನ್ನುಂಟುಮಾಡಿದರು, ಅವರು ಮುಹಮ್ಮದನನ್ನೂ ಅವನ ಶಿಷ್ಯರನ್ನೂ ಹುಚ್ಚರೆಂದು ಅಣಕಿಸಲು ಮೊದಲಿಟ್ಟರು. ತಮ್ಮಲ್ಲಿ ಯಾರೂ ಅವನ ಬೋಧನೆಗೆ ಕಿವಿಗೊಡ ಕೂಡದೆಂದು ಕಟ್ಟಪ್ಪಣೆ ಮಾಡಿದರು . ತನಗೆಷ್ಟೋ ಹಿಂಸೆಕೊಟ್ಟರೂ ಮುಹಮ್ಮದನು ಶಾಂತರೀತಿಯಿಂದಲೇ ಧರ್ಮಬೋಧೆಮಾಡು ತ್ತಿದ್ದು, ದೈವಬಲದಿಂದ ಖುರ್ರಾನ್ ಎಂಬ ಪವಿತ್ರ ಗ್ರಂಥವನ್ನೂ ರಚಿಸಿದನು. ಮುಹಮ್ಮದನ ಬೋಧನೆಯಿಂದ ತಮ್ಮ ವಿಗ್ರಹಗಳ ಪೂಜೆಯು ನಿಂತುಹೋಗಿ, ಹಣ ಸಂಪಾದನೆಗೆ ತೊಂದರೆಯಾಗುವುದೆಂದು ಕೊರೈಷ್ ಬುಡಕಟ್ಟಿನವರು, ಅವನನ್ನೂ ಅವನ ಶಿಷ್ಯರನ್ನೂ ಬಹಳ ಕಾಡಿಸಿ ಶಿಕ್ಷೆಮಾಡಿದರು. ಕೊನೆಗೆ ಶಿಷ್ಯರೆಲ್ಲರೂ ಗುರುವಿನ ಸಲಹೆಯಂತೆ ಪಕ್ಕದ ಅಬಿಸೀನಿಯಾ ದೇಶಕ್ಕೆ ವಲಸೆ ಹೋದರು. ಅಲ್ಲಿಯ ದೊರೆ ಕ್ರೈಸ್ತಮತದವನಾದರೂ, ಅನ್ಯಮತ ಸಹಿಷ್ಣುವಾಗಿ, ಎಲ್ಲರಿಗೂ ಆಶ್ರಯಕೊಟ್ಟಿದ್ದನು. ಶತ್ರುಪಕ್ಷದವರು ಅಲ್ಲಿಗೂ ಬಂದು ತೊಂದರೆ ಮಾಡಬೇಕೆಂದಿರಲು ಅಲ್ಲಿಯ ಸಾಧುವಾದ ರಾಜನು ಆ ದುಷ್ಟರನ್ನು ನಿಂದಿಸಿ ಹಿಂದಕ್ಕಟ್ಟಿದನು.

ಶತ್ರುಗಳ ಕಾಟವು ಹೆಚ್ಚಾಗಲು ಮುಹಮ್ಮದನು ಮೂರು ವರ್ಷಗಳ ಕಾಲ ತನ್ನ ಕೆಲವು ಶಿಷ್ಯರೊಂದಿಗೆ ಪಕ್ಕದ ಗಿರಿದುರ್ಗಗಳಲ್ಲಡಗಿದ್ದನು ಜುಬೈರ ನೆಂಬ ಸಾಧುವಿನ ಉಪದೇಶದಿಂದ ಶತ್ರುಗಳು ತಮ್ಮ ಕೃತ್ಯಕ್ಕೆ ನಾಚಿಕೆಪಡು ವಂತಾಗಲು ಮತ್ತೆ ಮಕ್ಕಾನಗರಕ್ಕೆ ಬಂದು ವಾಸವಾಗಿದ್ದನು. ಆದರೆ ಒಂದು ವರ್ಷ ಕಾಲವಾದ ಮೇಲೆ ಇವನ ಚಿಕ್ಕಪ್ಪನೂ, ಪತ್ನಿಯಾದ ಖದೀಜಳೂ ಮೃತಿ ಹೊಂದಲಾಗಿ, ಮುಹಮ್ಮದನು ಬಹಳ ದುಃಖಿತ ನಾದನು. ಮತ್ತೆ ಶತ್ರುಗಳ ಕಾಟವೂ ಇಮ್ಮಡಿಯಾಯಿತು. ವಿರೋ ಧಿಗಳು ಮಕ್ಕಾನಗರದಲ್ಲಿ ಇಸ್ಲಾಂ ಮತವನ್ನು ಮೂಲೋತ್ಪಾಟನ ಮಾಡತೊಡಗಿದರು. ಮಕ್ಕಾ ನಗರದವರು ತನ್ನ ಬೋಧೆಯನ್ನು ಕೇಳಲು ಅಡ್ಡಿಯಾದುದನ್ನು ಕಂಡು, ಮುಹಮ್ಮದನು ಯಾತ್ರಿಬ್ ನಗರ ದಿಂದ ಬರುತ್ತಿದ್ದ ಯಾತ್ರಿಕರಿಗೆ ಧರ್ಮೋಪದೇಶ ಮಾಡುತ್ತ ಬಂದನು. ಅವರಲ್ಲಿ ಹಲವರು ಇಸ್ಲಾಂ ಮತವನ್ನೊಪ್ಪಿಗೊಂಡು, ಮುಹಮ್ಮದನನ್ನು ತಮ್ಮೂರಿಗೆ ಬರುವಂತೆ ಪ್ರಾರ್ಥಿಸಿಕೊಂಡರು.

ಇತ್ತ ಶತ್ರುಗಳೆಲ್ಲರೂ ಒಳಸಂಚು ನಡೆಯಿಸಿ, ಮಹಮ್ಮದನನ್ನು ಅವನು ಮನೆಯಿಂದ ಹೊರಗಡೆ ಹೊರಟಾಗ, ಕೊಲ್ಲಬೇಕೆಂದು ಸಜ್ಜು ಮಾಡಿಕೊಳ್ಳುತ್ತಿರಲು, ಇದನ್ನರಿತ ಮಹಮ್ಮದನು ಮನೆಯ ಹಿಂಭಾಗದಿಂದ ಅಬ್ದುಲ್ಲಾನ ಮನೆ ಸೇರಿ, ಅಲ್ಲಿಂದ ಅವನೊಡನೆ ಮಕ್ಕಾ ನಗರವನ್ನು ಬಿಟ್ಟು ಹೊರಟನು. ಮೂರು ದಿನಗಳವರೆಗೆ ಒಂದು ಗುಹೆಯಲ್ಲಡಗಿದ್ದು, ಕಷ್ಟದಿಂದ ಎರಡು ಒಂಟೆಗಳನ್ನು ತರಿಸಿ, ಇಬ್ಬರೂ ಯಾತ್ರಿಬ್ ನಗರದ ಕಡೆಗೆ ಹೊರಟರು. ಕೋಬಾ ಎಂಬ ಹಳ್ಳಿಗೆ ಬರುವ ವೇಳೆಗೆ ಆಲಿಯು ಇವರ ಜೊತೆ ಗೂಡಿದನು. ಕೆಲವು ದಿನಗಳ ಬಳಿಕ ಯಾತ್ರಿಬ್ ನಗರದ ಮಹಮ್ಮದನ ಶಿಷ್ಯರು ತಮ್ಮ ಗುರುವನ್ನು ವೈಭವದಿಂದ ತಮ್ಮೂರಿಗೆ ಕರೆದುಕೊಂಡು ಹೋದರು. ಮಹಮ್ಮದನು ಕ್ರಿ. ಶ. ೬೨೨ನೆಯ ಜುಲೈ ೨ರಲ್ಲಿ ಯಾತ್ರಿಬ್ ನಗರವನ್ನು ಸುರಕ್ಷಿತವಾಗಿ ಸೇರಿದನು. ಈ ಪವಿತ್ರ ದಿನದ ನೆನಪುಮಾಡಿಕೊಂಡು, ಅಂದಿನಿಂದ ಮಹಮ್ಮದೀಯರು **ಹಿಜಿರಾ** ಎಂಬ ಶಕೆಯನ್ನು ಎಣಿಸುತ್ತಿರುವರು.

ಯಾತ್ರಿಬ್ ನಗರಕ್ಕೆ ಬಂದನಂತರ ಮಹಮ್ಮದನ ಬೋಧೆಯನ್ನು ಕೇಳಿ, ಅನೇಕರು ಇಸ್ಲಾಂಮತಕ್ಕೆ ಸೇರಿಕೊಂಡರು. ಹಿಂದೆ ಆ ನಗರದ ಎರಡು ಬುಡಕಟ್ಟಿನವರಿಗಿದ್ದ ದ್ವೇಷವು ಮಹಮ್ಮದನ ಉಪದೇಶದಿಂದ ಮಾಯವಾಗಿ, ಅವರೆಲ್ಲರೂ ಒಟ್ಟಾಗಿ ಇಸ್ಲಾಂ ಮತ ಪ್ರಚಾರಕ್ಕೆ ಸಿದ್ಧರಾದರು. ಮಹಮ್ಮದನನ್ನು ಗುರುವಾಗಿ ಮಾಡಿಕೊಂಡು, ತಮ್ಮೂರಿಗೆ ಗುರುವಿನ ನಗರವೆಂದು ಅರ್ಥಬರುವಂತೆ ' ಮದೀನಾ ' ಎಂಬ ಹೆಸರಿಟ್ಟರು.

ಮದೀನಾ ನಗರವಾಸಿಗಳು ದಿನಕ್ರಮೇಣ ತಮ್ಮ ಗುರುವಿನಲ್ಲಿ ಹೆಚ್ಚು ಭಕ್ತಿಯನ್ನು ಪ್ರದರ್ಶಿಸುತ್ತಾ ಬಂದರು. ಎಲ್ಲರೂ ಉತ್ಸಾಹದಿಂದ ಪ್ರಾರ್ಥನೆಗಾಗಿ ಒಂದು ಮಸೀದಿಯನ್ನು ಸಿದ್ಧಪಡಿಸಿದರು. ಈ ಕಾರ್ಯದಲ್ಲಿ ಮಹಮ್ಮದನು ಎಲ್ಲರಂತೆ ತಾನೂ ಕಟ್ಟಡವನ್ನು ಕಟ್ಟಲು ನೆರವಾಗಲು ಎಲ್ಲರ ಮೆಚ್ಚುಗೆಗೆ ಪಾತ್ರನಾದನು. ಮಸೀದಿಯು ಪೂರ್ತಿಯಾದ ಮೇಲೆ ಅಲ್ಲಿ ಮಹಮ್ಮದನು ನಿತ್ಯವೂ ಎಲ್ಲರಿಗೂ ಇಸ್ಲಾಂ ತತ್ವವನ್ನುಪದೇಶಿಸುತ್ತಿದ್ದನು. ದೈವಭಕ್ತಿ, ದೀನರಲ್ಲಿ ದಯೆ, ದಾನ ಧರ್ಮಗಳೇ ಮೊದಲಾದ ಸಂಗತಿಗಳನ್ನು ಅಲ್ಲಿನ ಜನಗಳು ತಮ್ಮ ಗುರುಮುಖದಿಂದ ತಿಳಿದುಕೊಂಡರು. ಇದರಿಂದ ಅನೇಕರು ತಮ್ಮ ದುರ್ವ್ಯಾಪಾರಗಳನ್ನು ಬಿಟ್ಟು ಸಜ್ಜನರಾದರು. ಸ್ವಲ್ಪ ಕಾಲದಲ್ಲಿಯೇ ಅವನು ಆ ನಗರವಾಸಿಗಳ ನಾಯಕನಾದುದನ್ನು ಕಂಡು, ಅಲ್ಲಿದ್ದ

ಕೆಲವು ಯಹೂದ್ಯರಿಗೆ ಅವನ ಮೇಲೆ ದ್ವೇಷಾಸೂಯೆಗಳು ತಲೆದೋರಿದವು. ಮುಹಮ್ಮದನು ಅನ್ಯಮತೀಯರು ತನ್ನ ಧರ್ಮವನ್ನು ಒಪ್ಪಿಕೊಳ್ಳಬೇಕೆಂದು ಬಲಾತ್ಕಾರಮಾಡಲಿಲ್ಲ. ಇತರರು ತಮ್ಮ ಇಷ್ಟಬಂದಂತೆ ದೇವರ ಪೂಜೆ ಮಾಡಿಕೊಳ್ಳಬಹುದೆಂದೂ, ಯಾರೂ ಅನ್ಯಮತವನ್ನು ದೂಷಿಸಕೂಡದೆಂದೂ ತನ್ನ ಜನಗಳಿಗೆ ಸೂಚಿಸಿದ್ದನು. ತಾನು ಎಲ್ಲರ ನಾಯಕನಾಗಿದ್ದರೂ ಅಹಂಕಾರ ಪಡದೆ ಭಗವಂತನೆದುರಿನಲ್ಲಿ ಎಲ್ಲರೂ ಸಮಾನರೆಂದು ಬಾರಿಬಾರಿಗೂ ಹೇಳುತ್ತಿದ್ದನು. ಅಲ್ಲಿಯ ಜನಗಳಿಗೆ ವ್ಯಕ್ತಿ ಸ್ವಾತಂತ್ರ್ಯವನ್ನು ಕೊಟ್ಟಿದ್ದನಾದರೂ, ಯಾರೂ ತಮ್ಮ ಗುರುವಿನ ಅಪ್ಪಣೆಯಿಲ್ಲದೆ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ.

ಇತ್ತ ಮಹಮ್ಮದನ ವಿರೋಧಿಗಳು ಅವನ ವಿಷಯವಾಗಿ ದ್ರೋಹ ಚಿಂತನೆ ಮಾಡತೊಡಗಿದರು. ಆ ದುಷ್ಟರ ಸೊಕ್ಕನ್ನು ಮುರಿಯಲು ಮಹಮ್ಮದನು ತನ್ನ ಕಡೆಯವರನ್ನೆಲ್ಲಾ ಸೇರಿಸಿ ಯುದ್ಧ ಶಿಕ್ಷಣವಿತ್ತನು. ಈ ಮಧ್ಯೆ ಮಕ್ಕಾ ನಗರದಿಂದ ಬಂದ ಕೊರೈಷ ಮನೆತನದವರು ಮೆದೀನಾ ನಗರವನ್ನು ಮುತ್ತಲಾಗಿ ಮಹಮ್ಮದನು ಅವರನ್ನೆದುರಿಸಿ ಬದರ್ ಎಂಬ ಸ್ಥಳದಲ್ಲಿ ಎಲ್ಲರೊಡನೆ ಕಾದಿ, ಜಯಶೀಲನಾದನು. ಆಗಿನ ಕಾಲದಲ್ಲಿ ಸೆರೆ ಸಿಕ್ಕಿದವರಿಗೆ ಎಮುರಾಳಿಗಳು ಬಹಳ ಹಿಂಸೆಗಳನ್ನು ಕೊಡುತ್ತಿದ್ದರು. ಆದರೆ ಮಹಮ್ಮದನು ಅನೇಕರು ಕೈಸೆರೆಯಾಗಿದ್ದರೂ, ಎಲ್ಲರಿಗೂ ದಯೆತೋರಿಸಿ ಬಿಡುಗಡೆ ಮಾಡಿದನು. ತಾನು ಕೊಳ್ಳೆ ಹೊಡೆದ ಪದಾರ್ಥಗಳಲ್ಲಿ ದೀನರಿಗೊಂದು ಪಾಲನ್ನು ಕೊಟ್ಟನು. ಬದರ್ ಕದನದಿಂದ ಮಹಮ್ಮದನ ಕೀರ್ತಿಯು ಎಲ್ಲೆಲ್ಲೂ ಹರಡಿ, ಇಸ್ಲಾಂ ಧರ್ಮಪ್ರಚಾರಕ್ಕೆ ಒಳ್ಳೆಯ ಅನುಕೂಲವೊದಗಿತು. ಹೀಗೆ ಯುದ್ಧದಲ್ಲಿ ಜಯಶೀಲನಾದುದರಿಂದ ಮೆದೀನಾ ನಗರಕ್ಕೂ ಅದರ ಸುತ್ತು ಮುತ್ತಲ ಪ್ರದೇಶಕ್ಕೂ ಮಹಮ್ಮದನೇ ನಾಯಕನಾದುದಲ್ಲದೆ, ಎಲ್ಲರ ಆದರ ಗೌರವಗಳಿಗೂ ಅವನು ಪಾತ್ರನಾದನು.

ಇತ್ತ ಬದರ್ ಕದನದಲ್ಲಿ ಸೋತ ವಿರೋಧಿಗಳೆಲ್ಲರೂ ಒಂದು ವರ್ಷದೊಳಗೆ ಮೂರು ಸಾವಿರ ಸೈನಿಕರುಳ್ಳ ದಂಡನ್ನು ಶೇಖರಿಸಿ, ಮತ್ತೆ ತಮ್ಮ ದ್ವೇಷವನ್ನು ತೀರಿಸಿಕೊಳ್ಳಲು ಹವಣಿಸಿದರು. ಕೂಡಲೇ ಶತ್ರುಗಳು ಮೆದೀನಾ ನಗರವನ್ನು ಮುತ್ತಿದುದನ್ನು ಕಂಡ ಮಹಮ್ಮದನು ನಗರದಲ್ಲಿ ಎಲ್ಲರನ್ನೂ ಸಭೆ ಸೇರಿಸಿ ಕಾಳಗಕ್ಕೆ ಹುರಿದುಂಬಿಸಿದನು. ಇವನ ಕಡೆ ಆಗ

ಒಂದು ಸಾವಿರ ಸೈನಿಕರು ಮಾತ್ರ ವಿದ್ದುದರಿಂದ ಊಹುದ್ ಗುಡ್ಡದ ಬಳಿ ತನ್ನ ಸೂಚನೆಯಂತೆ ಯುದ್ಧ ಮಾಡಬೇಕೆಂದು ವಿಧಿಸಿದ್ದನು. ಆದರೆ ಸೈನಿಕರು ಚದುರಿ ಹೋದಕಾರಣದಿಂದಲೂ, ಅಲ್ಪ ಸಂಖ್ಯಾತರಾದುದರಿಂದಲೂ ಬಹಳ ಕಷ್ಟದಿಂದ ಶತ್ರುಗಳೊಡನೆ ಹೋರಾಡಿ ಮೆದೀನಾ ನಗರಕ್ಕೆ ಹಿಂದಿರಗ ಬೇಕಾಯಿತು.

ಊಹುದ್ ಕದನವಾದ ಮೇಲೆ ಅರಬ್ಬೀ ದೇಶದ ಬಹು ಜನರು ಮಹಮ್ಮದೀಯರ ದ್ವೇಷಿಗಳಾದರು. ಇದರ ಫಲವಾಗಿ ಮಹಮ್ಮದನು ಅನೇಕ ತೊಂದರೆಗಳನ್ನು ಸಹಿಸಿ, ತನ್ನ ರಾಷ್ಟ್ರದ ರಕ್ಷಣೆಗಾಗಿಯೂ, ಮತರಕ್ಷಣೆ ಗಾಗಿಯೂ ಯುದ್ಧಕ್ಕೆ ಕೈಹಾಕಬೇಕಾಯಿತು. ಮುರೈಸಿ ಕದನದಲ್ಲಿ ಮಹಮ್ಮದನಿಗೆ ಜಯವಾಗಿ ಅಲ್ಲಿ ಅನೇಕರು ಸೆರೆಸಿಕ್ಕಿದರು. ಶತ್ರು ರಾಜನ ಮಗಳಾದ ಜುವರಿಯಳ ಪ್ರಾರ್ಥನೆಯಂತೆ ಮಹಮ್ಮದನು ಆಕೆಯನ್ನು ಮದುವೆಯಾದನು. ಎಲ್ಲ ಬಂದಿಗಳನ್ನು ಬಿಡುಗಡೆ ಮಾಡಿದನು. ಶತ್ರು ಗಳನ್ನು ತಡೆಗಟ್ಟುವುದಕ್ಕಾಗಿ ಮೆದೀನಾ ನಗರದ ಸುತ್ತಲೂ ದೊಡ್ಡದೊಂದು ಕಂದಕವನ್ನು ತೋಡಿಸಿದನು.

ಕೆಲವು ಕಾಲಾನಂತರ ಕೊರೈಷ್ ಮನೆತನದವರು ಮಹಮ್ಮದನ ದ್ವೇಷದಿಂದ ಇಪ್ಪತ್ತುನಾಲ್ಕು ಸಾವಿರ ಸೈನ್ಯದೊಂದಿಗೆ ಭಾರಿ ಯುದ್ಧಕ್ಕೆ ಸಿದ್ಧ ರಾಗಿ ಬಂದರು. ಅವರ ಸೈನ್ಯವು ಕಂದಕದಿಂದಾಚೆ ನಿಂತು ಯುದ್ಧ ಮಾಡ ಬೇಕಾದುದರಿಂದ ಬಹಳ ತಡವಾಗಿ ಅವರು ತಂದಿದ್ದ ಆಹಾರ ಪದಾರ್ಥಗ ಳೆಲ್ಲವೂ ಮುಗಿದು ಹೋಗಿ, ಮಹಮ್ಮದೀಯರ ಪೆಟ್ಟಿನಿಂದ ಅವರು ಸೋತು ಹಿಂದಿರುಗಿದರು. ಈ ವಿಜಯದಿಂದ ಇಸ್ಲಾಂ ಮತ ಪ್ರಚಾರಕ್ಕೆ ಇನ್ನೂ ಹೆಚ್ಚಿನ ಅವಕಾಶವಾಯಿತು.

ಮಹಮ್ಮದನು ಮೆದೀನಾ ನಗರಕ್ಕೆ ಬಂದ ಆರು ವರ್ಷಗಳ ಮೇಲೆ ಮಕ್ಕಾ ನಗರಕ್ಕೆ ಹೋಗಲು ನಿಶ್ಚಯಿಸಿದನು. ಆದರೆ ಅಲ್ಲಿಯ ಕೊರೈಷ್ ಮನೆತನದವರು ಇನ್ನೂ ದ್ವೇಷಸಾಧನೆಯನ್ನು ಬಿಟ್ಟಿರಲಿಲ್ಲ. ಮಹಮ್ಮದನು ಮಕ್ಕಾ ಯಾತ್ರೆಯ ದೃಷ್ಟಿಯಿಂದ, ಸಾವಿರದ ನಾನ್ನೂರು ಮಂದಿ ಮಹಮ್ಮ ದೀಯರೊಡನೆ ನಿರಾಯುಧನಾಗಿ ಪ್ರಯಾಣ ಬೆಳಸಿದನು. ಎಲ್ಲರೂ ಹುದೈ ಬಿಯಾ ಎಂಬ ಪಟ್ಟಣಕ್ಕೆ ಬಂದಿಳಿದುಕೊಂಡ ಮೇಲೆ ಮಹಮ್ಮದನು ಮಕ್ಕಾ ಪ್ರವೇಶನ ಅನುಮತಿಗಾಗಿ ಶತ್ರುಗಳಿಗೆ ಹೇಳಿ ಕಳುಹಿಸಿದನು. ಆದರೆ ದ್ವೇಷಿ

ಗಳು ಅವನು ಮಕ್ಕಾ ನಗರ ಪ್ರವೇಶಿಸಲು ಆ ಬಾರಿ ಒಪ್ಪದಿದ್ದುದರಿಂದ ಅವರೊಡನೆ ಸಂಧಿಮಾಡಿಕ್ಕೊಂಡು ಎಲ್ಲರ ಜೊತೆಯಲ್ಲಿ ಹಿಂದಿರುಗಬೇಕಾಯಿತು. ಮಾರನೆಯ ವರ್ಷದಿಂದ ಮಹಮ್ಮದನು ಮೂರು ದಿನಗಳವರೆಗೆ ಮಾತ್ರ, ಯಾತ್ರಾರ್ಥಿಯಾಗಿ ಮಕ್ಕಾ ನಗರಕ್ಕೆ ಬರಬಹುದೆಂದೂ, ಶತ್ರುಗಳು ತನ್ನ ದೇಶದ ಮೂಲಕ ಸಿರಿಯಾದೇಶಕ್ಕೆ ವ್ಯಾಪಾರ ಮಾಡಿಕೊಂಡು ಹೋಗಲು ಸಮ್ಮತಿಸುವುದಾಗಿಯೂ ಮಹಮ್ಮದನು ಒಪ್ಪಂದ ಮಾಡಿಕ್ಕೊಂಡನು.

ಸ್ವಲ್ಪ ಕಾಲಾನಂತರ ಮಹಮ್ಮದನ ಪ್ರಾಬಲ್ಯವನ್ನು ಕಂಡು ಅವನ ಸುತ್ತ ಮುತ್ತಲ ಪ್ರದೇಶದವರೆಲ್ಲ ಅವನ ನಾಯಕತ್ವವನ್ನು ಒಪ್ಪಿಕೊಂಡರು. ಮಹಮ್ಮದನು ಇಸ್ಲಾಂಮತವನ್ನವಲಂಬಿಸುವಂತೆ ಅನೇಕ ದೊರೆಗಳಿಗೆ ನಿರೂಪಗಳನ್ನು ಕಳುಹಿಸಿದನು. ಅಬಿಸೀನಿಯಾ ದೇಶದ ಧೊರೆಯು ಮಹಮ್ಮದನ ಶಿಷ್ಯನಾದನು.

ಕ್ರಿ. ಶ. ೬೩೦ರಲ್ಲಿ ಮಹಮ್ಮದನು ಹತ್ತು ಸಾವಿರ ಮಂದಿ ಯೋಧರೊಡನೆ ಮಕ್ಕಾ ನಗರವನ್ನು ಮುತ್ತಿ ಶತ್ರುಗಳನ್ನಡಗಿಸಿದನು. ತಾನು ಯುದ್ಧದಲ್ಲಿ ಜಯಶೀಲನಾದರೂ ದ್ವೇಷಿಗಳಿಗೆ ದಯೆತೋರಿಸಿದನು. ಮಕ್ಕಾ ಪಟ್ಟಣದಲ್ಲಿ ಶಾಂತಿಯನ್ನು ನೆಲೆಗೊಳಿಸಿದ ಬಳಿಕ ಇಸ್ಲಾಂಮತ ಧರ್ಮಗಳನ್ನು ಎಲ್ಲರಿಗೂ ಬೋಧಿಸಿದನು. ಮಹಮ್ಮದನು ಹೀಗೆ ಅಪರಾಧಿಗಳಿಗೂ ಕ್ಷಮೆ ತೋರಿಸುತ್ತಿದ್ದುದರಿಂದ ಜನರೆಲ್ಲರಿಗೂ ಅವನಲ್ಲಿ ಪ್ರೀತಿ ಗೌರವಗಳು ಹೆಚ್ಚಾದುವು. ಆಗ ಎಲ್ಲರೂ ಸಂತೋಷದಿಂದ ತಾವಾಗಿಯೇ ಇಸ್ಲಾಂ ಮತಕ್ಕೆ ಸೇರಿಕೊಳ್ಳತೊಡಗಿದರು.

ಇದಾದನಂತರ ಮಹಮ್ಮದನು ಇನ್ನೂ ಹಲವಾರು ಕಡೆಗಳಿಗೆ ದಂಡೆತ್ತಿ ಹೋಗಿ ಯುದ್ಧದಲ್ಲಿ ಜಯಶೀಲನಾಗಿ ಬಂದನು. ತಾನು ಅಲ್ಲಲ್ಲಿ ತಂದಿದ್ದ ಅಪಾರವಾದ ಕೊಳ್ಳೆಯ ವಸ್ತುಗಳಲ್ಲಿ ಐದನೆಯ ಒಂದು ಭಾಗವನ್ನು ಮಕ್ಕಾ ನಗರದ ಬಡಬಗ್ಗರಿಗೆ ಹಂಚಿದನು. ಕಡೆಗೆ ಮೆದೀನಾ ಜನಗಳ ಕೋರಿಕೆಯ ಮೇರೆಗೆ ತನ್ನ ಸ್ಥಳಕ್ಕೆ ಹಿಂದಿರುಗಿದನು. ಹೀಗೆ ಅನೇಕ ಪ್ರಾಂತಗಳು ಮಹಮ್ಮದನ ಅಧೀನಕ್ಕೆ ಬಂದುದರಿಂದ ಅವನ ಕೀರ್ತಿಯು ಎಲ್ಲೆಲ್ಲೂ ಹರಡಿತು. ಇವನ ಮೇಲೆ ದಂಡೆತ್ತಿ ಬರಬೇಕೆಂದಿದ್ದ ಕೈಜರ್ ಚಕ್ರವರ್ತಿಯೂ ಕೂಡ ಯಾವ ತಂಟೆಗೂ ಹೋಗದೆ ಸುಮ್ಮನಾದನು. ಮುಂದೆ ಎರಡು

ವರ್ಷಗಳೊಳಗೆ ಒಟ್ಟು ಅರಬ್ಬೀದೇಶವೇ ಮಹಮ್ಮದನ ಅಧೀನವಾಗಿ ಎಲ್ಲೆಲ್ಲೂ ಇಸ್ಲಾಂ ಮತವು ಹರಡಿತು.

ಕೊನೆಯ ಬಾರಿ ಕ್ರಿ. ಶ. ೬೩೨ರಲ್ಲಿ ಮಹಮ್ಮದನು ಮಕ್ಕಾ ಯಾತ್ರೆಗೆ ಹೊರಟನು. ಆಗ ಒಂದು ಲಕ್ಷದ ಇಪ್ಪತ್ತುನಾಲ್ಕು ಸಾವಿರ ಮಂದಿ ಶಿಷ್ಯರು ಮಕ್ಕಾ ನಗರದಲ್ಲಿ ಸೇರಿದ್ದನ್ನು ಕಂಡು ಮಹಮ್ಮದನಿಗೆ ಮಹದಾನಂದವಾಯಿತು. ಅಲ್ಲಿಯ ಪ್ರಚಂಡ ಸಭೆಗೆ ಮಹಮ್ಮದನು ಕಡೆಯ ಉಪದೇಶವನ್ನು ಕೊಟ್ಟನು. "ಪಾಪಕರ್ಮಗಳನ್ನು ಬಿಡಬೇಕು. ಗುರುಹಿರಿಯರಲ್ಲಿ ಭಕ್ತಿಯಿಡಬೇಕು. ಒಗ್ಗಟ್ಟಿನಿಂದ ಬಾಳಬೇಕು"–ಎಂಬಿವೇ ಮೊದಲಾದ ಗುರುವಾಕ್ಯಗಳನ್ನು ಎಲ್ಲರೂ ಕೇಳಿ ಹರ್ಷಿತರಾದರು.

ಮಹಮ್ಮದನು ಮಕ್ಕಾ ನಗರದಿಂದ ಮೆದೀನಾ ನಗರಕ್ಕೆ ಮರಳಿ ಬಂದ ತಕ್ಷಣ, ರೋಗಗ್ರಸ್ತನಾಗಿ ಮಲಗಿ ಅದೇವರ್ಷವೇ ಪರಲೋಕವನ್ನು ಸೇರಿದನು. ಹೀಗೆ ಮಹಮ್ಮದನು ಇಸ್ಲಾಂಮತವನ್ನು ಉದ್ಧರಿಸಿ, ದೇಶನಾಯಕನಾಗಿಯೂ, ಮಹಮ್ಮದೀಯರ ಗುರುವಾಗಿಯೂ ಮಹೋಪಕಾರ ಮಾಡಿರುವನು.

ಮಹಮ್ಮದನು ದೃಢಕಾಯನಾಗಿಯೂ, ಸುಂದರಾಂಗನಾಗಿಯೂ ಇದ್ದನು. ಅರಬ್ಬೀ ದೇಶಕ್ಕೆಲ್ಲಾ ನಾಯಕನಾಗಿದ್ದರೂ, ಬೇಕಾದಷ್ಟು ಐಶ್ವರ್ಯವಿದ್ದರೂ ಸಾಮಾನ್ಯ ಉಡುಪುಗಳನ್ನು ಧರಿಸಿ ಸರಳಜೀವನವನ್ನು ನಡೆಸುತ್ತಿದ್ದನು. ಬಡವರಂತೆ ಒಂದು ಸಣ್ಣ ಮನೆಯಲ್ಲಿ ತನ್ನ ಸಂಸಾರದವರೊಂದಿಗೆ ವಾಸಿಸುತ್ತಿದ್ದನು. ಕಷ್ಟಪಟ್ಟು ಕೆಲಸಮಾಡಿ ಜೀವನವನ್ನು ನಡೆಸಬೇಕೆಂಬುದು ಇವನ ತತ್ವವೂ ಆಗಿತ್ತು. ಗೋಧಿಯ ಪದಾರ್ಥಗಳು ಖರ್ಜೂರ, ಹಾಲು ಇವುಗಳು ಹೆಚ್ಚಾಗಿ ಇವನ ಮುಖ್ಯಾಹಾರಗಳಾಗಿದ್ದವು. ಇವನು ಮಿತಭಾಷಿಯಾಗಿದ್ದನು. ಸರ್ವರಿಗೂ ಸಹಾಯ ಮಾಡುತ್ತಿದ್ದನು. ಯಥೇಚ್ಛವಾಗಿ ದಾನಧರ್ಮಗಳನ್ನೂ, ಅತಿಥಿಸತ್ಕಾರಗಳನ್ನೂ ಮಾಡುತ್ತಿದ್ದನು. ಯಾರಿಗೂ ಅನ್ಯಾಯ ಮಾಡದೆ ನ್ಯಾಯಮೂರ್ತಿಯಾಗಿದ್ದನು. ರಣಧೀರನಾಗಿ ಧೈರ್ಯೋತ್ಸಾಹಗಳಿಂದ ಯುದ್ಧಮಾಡಿದುದರ ಪರಿಣಾಮವಾಗಿ ಇಸ್ಲಾಂಮತ ಪ್ರಚಾರವು ಬಹುಬೇಗ ಹರಡಿತು. ಮಹಮ್ಮದನಿಗೆ ಅನೇಕ ಪತ್ನಿಯರಿದ್ದರು. ಖದೀಜಳ ಮರಣಾನಂತರ ಆಯಷೆಯನ್ನು ವಿವಾಹವಾದನು. ಯುದ್ಧ ಪ್ರಸಂಗಗಳಿಂದ ಹಿಂದಿನ ರಾಜರಂತೆ ಮತ್ತು

ಮುಹಮ್ಮದೀಯರ ಆಗಿನ ಪದ್ಧತಿಯಂತೆ ಇನ್ನೂ ಕೆಲವರನ್ನು ವಿವಾಹವಾಗಿದ್ದನು. ಮಕ್ಕಳನ್ನು ಕಂಡರೆ ಬಹಳ ಅಕ್ಕರೆ ಎಲ್ಲರೂ ಸಂತೋಷದಿಂದಲೂ ಐಕಮತ್ಯದಿಂದಲೂ ಬಾಳಬೇಕೆಂಬುದೇ ಮುಹಮ್ಮದನ ಮುಖ್ಯ ಆಶೆಯಾಗಿತ್ತು. ಪವಿತ್ರವಾದ ಖುರ್ರಾ ಗ್ರಂಥವನ್ನು ರಚಿಸಿ, ಅದರ ನಿಯಮಗಳನ್ನು ಪಾಲಿಸುತ್ತಾ ಎಲ್ಲರಿಗೂ ಆದರ್ಶಪ್ರಾಯನಾಗಿದ್ದನು. ಜನಗಳನ್ನು ಒಳ್ಳೆಯ ಮಾತಿನಿಂದಲೇ ಸನ್ಮಾರ್ಗಕ್ಕೆ ತರುತ್ತಿದ್ದನು. ಆಗಿನ ಕಾಲದ ಅನೇಕ ದುಷ್ಟವಾದ ಮತ್ತು ಅಸಹ್ಯ ಪದ್ಧತಿಗಳನ್ನು ತಪ್ಪಿಸಿದನು. ತಾನು ಎಲ್ಲರಂತೆ ಸಾಮಾನ್ಯ ಮನುಷ್ಯನೆಂದು ಖುರಾನಿನಲ್ಲಿ ಸೂಚಿಸಿರುವನು. ಹೀಗೆ ಪೈಗಂಬರ್ ಮುಹಮ್ಮದನು ರಣವೀರನಾಗಿಯೂ, ಧರ್ಮವೀರನಾಗಿಯೂ ಅದ್ಭುತ ಜೀವನವನ್ನು ನಡೆಸಿ ಪ್ರಖ್ಯಾತನಾಗಿದ್ದಾನೆ.

# ಗುರುನಾನಕ್

ಕ್ರಿ. ಶ. ಹದಿನೈದನೆಯ ಶತಮಾನದ ಪ್ರಾರಂಭದಲ್ಲಿ ಸಿಕ್ ಮತಸ್ಥಾಪಕನಾದ ಗುರುನಾನಕನು ಪಂಜಾಬ್ ದೇಶದಲ್ಲಿರುವ ಗುಜರನ್‌ವಾಲಾ ಜಿಲ್ಲೆಗೆ ಸೇರಿದ ತಾಳ್ವಂದಿ ಗ್ರಾಮದಲ್ಲಿ ಜನ್ಮವೆತ್ತಿದನು. ಕ್ಷತ್ರಿಯ ವಂಶದವನಾದ ಕಾಳು ಈತನ ತಂದೆ. ತೃಪ್ತಾ ಎಂಬಾಕೆ ನಾನಕನ ತಾಯಿ.

ನಾನಕನು ಜನನ ಮೊದಲ್ಗೊಂಡು ಲೋಕೋತ್ತರವಾದ ನಡೆವಳಿಕೆಯನ್ನು ತೋರ್ಪಡಿಸುತ್ತಿದ್ದನು. ಐದನೆಯ ವಯಸ್ಸಿಗೆ ಗಹನವಾದ ಮಾತುಗಳನ್ನಾಡುತ್ತಿದ್ದನು ಏಳನೆಯ ವರುಷದಲ್ಲಿ ಕಾಳುವು ಬಾಲಕ ನಾನಕನನ್ನು ಮಠಕ್ಕೆ ಸೇರಿಸಿದನು. ಅಲ್ಲಿಯ ಗುರುಗಳಿಗೆ ಅವನ ಅದ್ಭುತ ಪ್ರಜ್ಞೆಯನ್ನು ನೋಡಿ ಆಶ್ಚರ್ಯವಾಯಿತು. ಪಾಠದ ಕಾಲದಲ್ಲಿಯೇ ಈ ಮಗುವು ಧ್ಯಾನಮಗ್ನನಾಗಿ ಕುಳಿತಿದ್ದಾಗ, ಎಲ್ಲರೂ ಅವನೊಬ್ಬ ಮಹಾಪುರುಷನಾಗುವನೆಂದು ಭಾವಿಸಿ ನಮಸ್ಕರಿಸಿ ಹೋಗುತ್ತಿದ್ದರು. ನಾನಕನು ಮಠದಲ್ಲಿ ಕೆಲವು ಕಾಲ ಮಾತ್ರ ವಿದ್ಯಾಭ್ಯಾಸ ಮಾಡಿದನು. ಮನೆಯಲ್ಲಿ ಧಾರ್ಮಿಕ ಗ್ರಂಥಗಳನ್ನೋದುತ್ತ, ಸದಾ ಧ್ಯಾನನಿರತನಾಗಿ ಸಜ್ಜನರೊಡನೆ ಸಂಭಾಷಿಸುತ್ತಾ ಕಾಲಹರಣ ಮಾಡುತ್ತಿದ್ದನು. ಈ ವಿಧವಾದ ಶ್ರದ್ಧಾಬುದ್ಧಿಗಳಿಂದ ನಾನಕನಲ್ಲಿ ಬಾಲ್ಯದಿಂದಲೇ ಭಗವದ್ಭಕ್ತಿಯು ಬೇರೂರಿತ್ತು.

ಕಾಳುವು ತನ್ನ ಮಗನನ್ನು ಹೇಗಾದರೂ ಮಾಡಿ ಲೌಕಿಕ ಜ್ಞಾನದಲ್ಲಿ ಮುಂದಕ್ಕೆ ತರಬೇಕೆಂದು ಪ್ರಯತ್ನಿಸಿ ಪರ್ಷಿಯಾ ಭಾಷಾಭ್ಯಾಸವನ್ನೂ ಮಾಡಿಸಿದನು. ಆಗಿನ ರಾಜಕೀಯ ಕೆಲಸಗಳಿಗೆ ಪರ್ಷಿಯಾ ಭಾಷೆಯು ಬಹಳ ಸಹಾಯವಾಗಿದ್ದುದರಿಂದ ಹಿಂದುಗಳೆಲ್ಲರೂ ಆ ಭಾಷೆಯನ್ನು ಕಲಿಯುತ್ತಿದ್ದರು, ನಾನಕನು ಕೆಲವುಕಾಲ ನಿರಾಯಾಸವಾಗಿ ಆ ಭಾಷೆಯನ್ನೂ ಕಲಿತನು. ಬಳಿಕ ತಂದೆಯು ಇವನಿಗೆ ಕುಲಪದ್ಧತಿಯಂತೆ ಉಪನಯನವನ್ನು ಮಾಡುವುದಕ್ಕೆ ತೊಡಗಲು, ಅಂತಹ ಬಹಿರಾಡಂಬರವು ಬೇಕಿಲ್ಲವೆಂದು ತಿಳಿಸಿ, ಪುರೋಹಿತರ ಬಾಯಿ ಮುಚ್ಚಿಸಿದನು. ಈ ಮಗನು ಮೂರ್ಖ

ನಾಗುವನೆಂದು ಕಾಳುವು ಹೆದರಿ, ಆಪ್ತರ ಸಲಹೆಯಂತೆ ನಾನಕನಿಗೆ ವಿವಾಹ ಮಾಡಿದರೆ ಅವನು ಸರಿಹೋಗುವನೆಂದು ಭಾವಿಸಿದನು. ಅದಕ್ಕಾಗಿ ತಂದೆಯು ನಾನಕನ ಹದಿನಾಲ್ಕನೆಯ ವರುಷದಲ್ಲಿಯೇ ಸೂಲಖಾನಿಯೆಂಬ ಕನ್ಯಾರತ್ನವನ್ನು ತಂದುಕೊಂಡು ವಿವಾಹವನ್ನು ನೆರವೇರಿಸಿದನು. ಅನಂತ ರವೂ ನಾನಕನು ಪ್ರಾಪಂಚಿಕ ವಿಷಯಗಳ ಕಡೆ ಗಮನಕೊಡದೆ, ಸದಾ ಧ್ಯಾನಚಿತ್ತನಾಗಿರುತ್ತಾ ಋಷಿಯಂತೆ ಇರುತ್ತಿದ್ದನು. ತಾಯಿ ತಂದೆಗಳ ಉಪದೇಶವು ಅವನ ದೃಢಸಂಕಲ್ಪಕ್ಕೆ ಅಡ್ಡಿ ಬರಲಿಲ್ಲ. ನಾನಕನು ಅವರಿಗೇ ಧರ್ಮೋಪದೇಶ ಮಾಡಿಬಿಡುತ್ತಿದ್ದನು. ಮಗನ ವಿಚಾರವನ್ನು ಸರಿಯಾಗಿ ತಿಳಿದುಕೊಳ್ಳದೆ ಕಾಳುವು ನಾನಕನಿಗೆ ವೈದ್ಯಪರೀಕ್ಷೆ ಮಾಡಿಸಿದನು. ವೈದ್ಯನು ನಾನಕನ ಬಳಿ ನಾಡೀ ಪರೀಕ್ಷೆಗೆ ಬಂದಾಗ, ಅವನ ತತ್ವೋಪದೇಶವನ್ನು ಕೇಳಿ ನಮಸ್ಕಾರ ಮಾಡಿ, ಅವನು ಮಹಾತ್ಮನೆಂದು ನಮಸ್ಕರಿಸಿ ವೈದ್ಯನು ಹೊರಟು ಹೋದನು.

ಪಂಜಾಬ್ ದೇಶದಲ್ಲಿ ದೌಲತ್ ಖಾನನೆಂಬ ಅಧಿಕಾರಿಯ ಕೈಕೆಳಗೆ ಅಮೀಜಯರಾಮನೆಂಬುವನು ಉದ್ಯೋಗ ಮಾಡುತ್ತಿದ್ದನು. ಈತನು ಕಾಳುವಿನ ಮಿತ್ರನಾದ ಕಾರಣ ಹಿಂದೀ ಮತ್ತು ಪರ್ಷಿಯಾ ಭಾಷೆಗಳೆರಡನ್ನೂ ಬಲ್ಲ ನಾನಕನಿಗೆ ಒಂದು ಕೆಲಸವನ್ನು ಕೊಡಿಸಿ, ಅವನ ತಂದೆ ತಾಯಿಗಳ ಚಿಂತೆಯು ದೂರವಾಗಲು ಸಹಕರಿಸಿದನು. ಮುಂದೆ ನಾನಕನು ಸುಲ್ತಾನ ಪುರದಲ್ಲಿ ಉದ್ಯೋಗ ಮಾಡುತ್ತಾ ತನ್ನ ಮಡದಿ ಮತ್ತು ಶ್ರೀಚಂದ್ ಮತ್ತು ಲಕ್ಷ್ಮೀದಾಸ್ ಎಂಬಿಬ್ಬರು ಮಕ್ಕಳೊಡನೆ ಕೆಲಕಾಲ ಸೌಖ್ಯವಾಗಿದ್ದನು. ಒಬ್ಬ ಮಹಮ್ಮದೀಯ ಅಧಿಕಾರಿಯ ಕೈಕೆಳಗೆ ಉಗ್ರಾಣದ ಅಧಿಕಾರಿಯಾಗಿ ನಾನಕನು ಕೆಲಸಮಾಡುತ್ತಾ ತನ್ನ ಸದ್ಗುಣಗಳಿಂದ ಎಲ್ಲರ ಮೆಚ್ಚುಗೆಗೆ ಪಾತ್ರ ನಾಗಿದ್ದನು. ತನಗೆ ವೇತನ ರೂಪದಲ್ಲಿ ಸಿಕ್ಕುತ್ತಿದ್ದ ದವಸದಲ್ಲಿ ಗೃಹಕೃತ್ಯಕ್ಕೆ ಉಪಯೋಗವಾಗಿ ಮಿಕ್ಕುದ್ದನ್ನೆಲ್ಲಾ, ಬಡವರಿಗೆ ದಾನಮಾಡಿ ಬಿಡು ತ್ತಿದ್ದನು.

ಹೀಗೆ ನಾನಕನು ಉದ್ಯೋಗದಲ್ಲಿದ್ದಾಗಲೂ, ತತ್ವ ವಿಚಾರ ಚಿಂತನೆಯ ಲ್ಲಿಯೇ ನಿರತನಾಗಿರುತ್ತಿದ್ದನು. ಉಗ್ರಾಣದ ಪದಾರ್ಥಗಳನ್ನು ಅಳೆಯುವಾಗ ಏಕ್, ದೋ, ತೀನ್ ಎಂದೆಣಿಸುತ್ತಾ 'ತೇರಾ' ಎಂಬ ಹದಿಮೂರರ ಸಂಖ್ಯೆ ಬಂದಾಗ, ಭಗವಂತನ ಸ್ಮರಣೆಯಾಗಿ (ತೇರಾ ಎಂದರೆ ನಿನ್ನದೆಂದರ್ಥ)

ನಾಲ್ಕಾರು ಬಾರಿ ಅದೇ ಪದವನ್ನುಚ್ಚರಿಸುತ್ತಾ ದೇವರ ಭ್ರಮೆಯಲ್ಲಿದ್ದು, "ಎಲ್ಲವೂ ದೇವರದು." ಎಂದು ವೈರಾಗ್ಯ ತಾಳುತ್ತಿದ್ದನು. ಸಂಜೆಯಾಗುತ್ತಲೇ ನಿರ್ಜನ ಪ್ರದೇಶಕ್ಕೆ ಹೋಗಿ ಧ್ಯಾನ ಭಜನೆಗಳಲ್ಲಿ ಕಾಲ ಕಳೆಯುತ್ತಿದ್ದನು. ಹೀಗೆ ಮನೆಯಲ್ಲೂ, ಉದ್ಯೋಗದಲ್ಲೂ, ವಿರಾಮ ಕಾಲದಲ್ಲೂ ನಾನಕನಿಗೆ ಭಗವಂತನ ಸ್ಮರಣೆ ಬಿಟ್ಟರೆ ಬೇರೊಂದು ಬೇಡವಾಯಿತು. ಇದರಿಂದ ಬರ ಬರುತ್ತಾ ವೈರಾಗ್ಯವು ಹೆಚ್ಚಾಗಲು ತನ್ನ ಉದ್ಯೋಗವನ್ನು ಕೈ ಬಿಟ್ಟನು.

ಕೆಲವು ದಿನಗಳ ತರುವಾಯ ನಾನಕನ ಮಹಿಮೆಯು ಎಲ್ಲರಿಗೂ ಅರಿವಾಗಿ, ಅವನ ಕೀರ್ತಿಯು ಎಲ್ಲೆಲ್ಲೂ ಹರಡಿತು. ನಾನಕನು ಆ ವೂರಿನಿಂದ ಹೊರಟ ಮೇಲೆ ದೇಶಸಂಚಾರ ಮಾಡುತ್ತಾ, ಜನಸಾಮಾನ್ಯಕ್ಕೆ ತನಗೆ ತೋರಿದ್ದ ತತ್ವಗಳನ್ನು ತಿಳಿಯ ಪಡಿಸಿದನು. ನಾನಕನ ಬಳಿಯಲ್ಲೇ ಇರುತ್ತಿದ್ದ ಮರ್ದನನೆಂಬ ಶಿಷ್ಯನು ಆಗಾಗೆ ಗುರುವಾಣಿಯನ್ನು ಬರೆದಿಡುತ್ತಿದ್ದನು. ಹೀಗೆ ಬರೆದಿಟ್ಟ ವಿಚಾರಗಳ ಪೈಕಿ, ಗುರುನಾನಕನ ಸ್ಫೂರ್ತಿಯುತವಾದ ಕವಿತೆಗಳು ಸಿಕ್ ಮತೀಯರ ಆದಿ ಗ್ರಂಥವಾಗಿದೆ. ನಾನಕನು ಅಮೀನಾಬಾದ್ ಎಂಬ ಸ್ಥಳದಲ್ಲಿದ್ದಾಗ ಒಂದು ಆಶ್ಚರ್ಯ ಪ್ರಸಂಗವು ನಡೆಯಿತು. ಒಂದೇ ಬಾರಿಗೆ ಬಡವ ಮತ್ತು ಭಾಗ್ಯವಂತರಿಬ್ಬರೂ ತಮ್ಮ ತಮ್ಮ ಮನೆಗಳಿಗೆ ಊಟಕ್ಕೆ ಬರಬೇಕೆಂದು ಗುರುವನ್ನು ಪ್ರಾರ್ಥಿಸಿದರು. ಅವರಿಬ್ಬರ ಮನೆಯಿಂದಲೂ ಒಂದೊಂದು ರೊಟ್ಟಿಯನ್ನು ತರಿಸಿಕೊಂಡು ನಾನಕನು ಬೇರೆ ಬೇರೆ ಕೈಗಳಲ್ಲಿ ಅವುಗಳನ್ನಿಟ್ಟುಕೊಂಡು, ಅಲ್ಲಿ ನೆರದವರಿಗೆ ಅವುಗಳನ್ನು ಹಿಂಡಿ ತೋರಿಸಿದನು. ಬಡವನ ಮನೆಯ ರೊಟ್ಟಿಯಿಂದ ಹಾಲೂ, ಭಾಗ್ಯವಂತನ ಮನೆಯ ರೊಟ್ಟಿಯಲ್ಲಿ ರಕ್ತವೂ ತೊಟ್ಟಿಕ್ಕಲಾಗಿ ಎಲ್ಲರೂ ಆಶ್ಚರ್ಯಪರರಾದರು. ಆಗ ಗುರುವು ಬಡತನ ರೊಟ್ಟಿಯು ಕಷ್ಟಾರ್ಜಿತವಾದುದಾಗಿದ್ದು ಶುದ್ಧವಾಗಿರುವುದೆಂದೂ, ಅನ್ಯಾಯ ಮಾರ್ಗದಿಂದ ಭಾಗ್ಯವಂತನಾಗಿದ್ದವನ ಮನೆಯಿಂದ ಬಂದ ರೊಟ್ಟಿಯು ಅಶುದ್ಧವಾದುದೆಂದೂ ತಿಳಿಸಿದಾಗ ಆ ಸಿರಿವಂತನು ಮುಂದೆ ತನ್ನ ಜೀವನವನ್ನು ಸರಿಪಡಿಸಿಕೊಂಡು ಸತ್ಯವಂತನಾದನು.

ಗುರುನಾನಕನು ದೇಶ ಸಂಚಾರಮಾಡುತ್ತಿದ್ದ ಕಾಲದಲ್ಲಿ ಪ್ರತಿಯೊಂದು ಊರಿನ ಜನಗಳು ಆತನನ್ನು ವೈಭವದಿಂದ ಬರಮಾಡಿಕೊಂಡು ಗೌರವಿಸುತ್ತಿದ್ದರು. ಫಲ ಪುಷ್ಪಾದಿಗಳನ್ನೂ ಕಾಣಿಕೆಗಳನ್ನೂ ಸಮರ್ಪಿಸಿ ಸತ್ಕರಿಸುತ್ತಾ, ಆತನ ದಿವ್ಯೋಪದೇಶವನ್ನು ಕೇಳಲು, ಜಾತಿ ಮತಭೇದಗಳನ್ನೆಣಿಸದೆ ಸರ್ವರೂ

ಸೇರುತ್ತಿದ್ದರು. ಗುರುನಾನಕನ ಉಪದೇಶವನ್ನು ಕೇಳಿದವರನೇಕರು ತಮ್ಮ ದೋಷಗಳನ್ನು ತಿದ್ದಿಕೊಂಡು, ಸಜ್ಜನರಾಗಿ ಬಾಳಿದರು. ಕೆಲವರು ತಮ್ಮ ಪಾಪಕೃತ್ಯಕ್ಕೆ ಪಶ್ಚಾತ್ತಾಪಪಟ್ಟು ಗುರುಗಳಲ್ಲಿ ಕ್ಷಮೆಯನ್ನು ಬೇಡಿಕೊಳ್ಳುತ್ತಿದ್ದರು. ಅಂತಹವರಲ್ಲಿ ಷೇಕ್‌ಸಜ್ಜನ್ ಎಂಬ ಸಾಹುಕಾರನು ಒಬ್ಬನು. ಈ ಷೇಕನು ಬಹಳ ಉದಾರಿಯಂತೆ ನಟಿಸಿ, ಹೊರಗಿನವರನ್ನು ತನ್ನ ಮನೆಗೆ ಬರಮಾಡಿಕೊಂಡು ರಾತ್ರಿ ಮಲಗಿದ್ದ ಕಾಲದಲ್ಲಿ ಅವರ ಸ್ವತ್ತನ್ನಪಹರಿಸಿ, ಅವರನ್ನು ಭಾವಿಗೆ ಹಾಕಿಸಿ ಹಣಸಂಪಾದಿಸಿದ್ದನು. ನಾನಕರು ತಮ್ಮ ದಿವ್ಯ ಜ್ಞಾನದಿಂದ ಅವನ ವಿಷಯವನ್ನರಿತು, ಕೆಲವು ಸಾದೃಶ್ಯಗಳಿಂದ ವಿವೇಕ ತಿಳಿಸಿದ ತಕ್ಷಣ, ಷೇಕನಿಗೆ ತನ್ನ ಪಾಪದ ಅರಿವಾಗಿ ಗುರುವಿನ ಪಾದಕ್ಕೆ ಬಿದ್ದು ಪ್ರಾಯಶ್ಚಿತ್ತಕ್ಕಾಗಿ ಪ್ರಾರ್ಥಿಸಿದನು. ಅವರು ಅವನ ಐಶ್ವರ್ಯವನ್ನೆಲ್ಲಾ ಬಡಬಗ್ಗರಿಗೆ ದಾನ ಮಾಡಿಸಿ ಅವನನ್ನು ದೈವಭಕ್ತನನ್ನಾಗಿ ಮಾಡಿದರು. ಈತನೇ ಮೊದಲನೆಯ ಸಿಕ್ ದೇವಾಲಯವನ್ನು ಕಟ್ಟಿಸಿದ ವದಂತಿಯಿದೆ.

ಗುರುನಾನಕನು ಮರ್ದನದೊಂದಿಗೆ ಕುರುಕ್ಷೇತ್ರ, ಹರಿದ್ವಾರ, ಕಾಶಿಯೇ ಮೊದಲಾದ ಪವಿತ್ರ ಯಾತ್ರಾಸ್ಥಳಗಳಿಗೆ ಹೋಗಿ ಅಲ್ಲಲ್ಲೇ ಧರ್ಮ ಪ್ರಚಾರ ಮಾಡಿದನು. ದಕ್ಷಿಣ ದೇಶದಲ್ಲಿ ಸಿಂಹಳದವರೆಗೂ ಪ್ರಯಾಣ ಮಾಡಿ, ಹನ್ನೆರಡು ವರುಷಗಳ ತರುವಾಯ ಸ್ವದೇಶಕ್ಕೆ ಹಿಂದಿರುಗಿದನು.

ವೃದ್ಧರಾದ ಮಾತಾಪಿತೃಗಳ ಕೋರಿಕೆಯಂತೆ ಕೆಲವುಕಾಲ ಮಾತ್ರ ತನ್ನೂರಿನಲ್ಲಿ ತಂಗಿದ್ದು ಮತ್ತೆ ತತ್ವಪ್ರಚಾರಕ್ಕೆ ಪ್ರವಾಸ ಹೊರಟನು. ಅಲ್ಲಿಂದ ಮಹಮ್ಮದೀಯರ ಪುಣ್ಯಸ್ಥಳವಾದ ಮಕ್ಕಾ ನಗರಕ್ಕೆ ಶಿಷ್ಯನಾದ ಮರ್ದನನ ಸಂಗಡ ಪ್ರಯಾಣ ಬೆಳಸಿದನು. ಈ ಮಹಾತ್ಮನು ಮರಳುಗಾಡಿನಲ್ಲಿ ನಡೆದು ಹೋಗುತ್ತಿದ್ದಾಗ ಮೇಘ ಮಂಡಲವು ಇವನನ್ನೇ ಅನುಸರಿಸಿಕ್ಕೊಂಡು ಹೋಗಿ ನೆರಳು ನೀಡುತ್ತಿದ್ದುದನ್ನು ಜೊತೆಯ ಪ್ರಯಾಣಿಕರು ಕಂಡು ಮಹದಾಶ್ಚರ್ಯಪಟ್ಟರು.

ನಾನಕನು ಮಕ್ಕಾ ಮಸೀದಿಗೆ ಬಂದ ತಕ್ಷಣ ಆಯಾಸದಿಂದ ಕಾಬಾ ಎಂಬ ಪವಿತ್ರವಾದ ಕಲ್ಲಿನ ಕಡೆಗೆ ತಿಳಿಯದೆ ಕಾಲು ಚಾಚಿಕ್ಕೊಂಡು ಮಲಗಿಬಿಟ್ಟನು. ಆ ಮಸೀದಿಯ ಧರ್ಮಾಧಿಕಾರಿಯು ಸ್ವಲ್ಪ ಹೊತ್ತಿಗೆ ಬಂದ ಕೂಡಲೇ ನಾನಕನು ದೇವರ ಕಡೆ ಕಾಲು ಚಾಚಿಕೊಂಡು ಮಲಗಿದ್ದಕ್ಕೆ ಆಕ್ಷೇಪಿಸಿ ಘರ್ಜಿಸಿದನು. ಆಗ ನಾನಕನು ತನಗೆ ಬಹಳ ಆಯಾಸವಾಗಿರುವ

ಕಾರಣ ದೇವರಿಲ್ಲದ ಕಡೆಗೆ ತನ್ನ ಕಾಲುಗಳನ್ನು ಎಳೆದು ಬಿಡುವಂತೆ ಅಧಿ ಕಾರಿಗೆ ಸೂಚಿಸಿದನು. ಧರ್ಮಾಧಿಕಾರಿಯು ಅದೇ ಮೇರೆಗೆ ನಾನಕನ ಕಾಲುಗಳನ್ನು ಬೇರೆ ದಿಕ್ಕಿಗೆ ತಿರುಗಿಸಿದಂತೆಲ್ಲಾ ಕಾಬಾಕಲ್ಲೂ ಅದೇ ಕಡೆ ತಿರುಗುತ್ತಿದ್ದುದನ್ನು ಅವನು ಕಂಡು ಆಶ್ಚರ್ಯಪಟ್ಟು ಆ ಮಹಾತ್ಮನ ಕ್ಷಮೆ ಯನ್ನು ಕೇಳಿಕೊಂಡು ಪುರಸ್ಕರಿಸಿದನು.

ಗುರುನಾನಕನು ಅಲ್ಲಿ ನೆರೆದ ಮಹಮ್ಮದೀಯರಿಗೆ ಪೈಗಂಬರ್ ಮಹ ಮ್ಮದನ ಬೋಧನೆಗಳ ಧರ್ಮರಹಸ್ಯವನ್ನು ತಿಳಿಸಲಾಗಿ, ಎಲ್ಲರೂ ಆತನನ್ನು ಗೌರವದಿಂದ ಕಂಡು ಸತ್ಕರಿಸಿದರು. ಕಡೆಗೆ ಅಲ್ಲಿಂದ ನಾನಕನು ಸ್ವದೇಶಕ್ಕೆ ಹಿಂದಿರುಗಿದನು.

ಗುರುನಾನಕನು ಭಾರತಕ್ಕೆ ಮರಳಿ ಬಂದ ಕೆಲವು ಕಾಲದಲ್ಲಿಯೇ ಆಫ್ಘಾನಿಸ್ಥಾನದಿಂದ ಬಾಬರನು ಅಗಾಧ ಸೈನ್ಯದೊಡನೆ ಈ ದೇಶದ ಮೇಲೆ ದಂಡೆತ್ತಿ ಬಂದು, ದೆಹಲಿಯ ದೊರೆಯಾಗಿದ್ದ ಇಬ್ರಾಹಿಂಲೂದಿಯನ್ನು ಯುದ್ಧದಲ್ಲಿ ಸೋಲಿಸಿದನು. ಅಲ್ಲದೆ ರಾಜನ ಸಂಗಡ ಈ ದೇಶದ ಹಲವು ಪ್ರಮುಖರನ್ನು ಬಂಧನದಲ್ಲಿಡಿಸಿದನು. ಆಗ ನಾನಕನೂ ಮರ್ದನನೊಡನೆ ಸೆರೆಯಾದುದಲ್ಲದೆ, ಕಾರಾಗೃಹದಲ್ಲಿ ಕಠಿಣವಾದ ಕಾರ್ಯಗಳನ್ನು ಮಾಡ ಬೇಕಾದ ಪ್ರಸಂಗ ಬಂದಿತು.

ಹೀಗೆ ನಾನಕನು ಕಾರಾಗೃಹದಲ್ಲಿದ್ದಾಗ ಒಮ್ಮೆ ಬಾಬರ್ ಚಕ್ರ ವರ್ತಿಯು ಬಂದಿಗಳ ಪರೀಕ್ಷೆಗಾಗಿ ಅಲ್ಲಿಗೆ ಬಂದಿದ್ದನು. ಆಗ ನಾನಕನಿಗೆ ರಾಗಿ ಬೀಸುವ ಕೆಲಸವಿದ್ದುದರಿಂದ ಆ ಕಲ್ಲಿನೆದುರಿಗೆ ಕುಳಿತು ತಾನು ಧ್ಯಾನ ಮಗ್ನನಾಗಿದ್ದನು. ಆದರೆ ಕಲ್ಲು ಮಾತ್ರ ರಾಗಿ ಬೀಸುತ್ತಿದ್ದ ಅದ್ಭುತ ದೃಶ್ಯ ವನ್ನು ಬಾಬರನು ಕಂಡ ಕೂಡಲೇ ನಾನಕನು ಮಹಾತ್ಮನೆಂದು ಭಾವಿಸಿ ಕೂಡಲೇ ಆತನಬಳಿ ಬಂದು ಕ್ಷಮೆಯನ್ನು ಕೇಳಿಕೊಂಡನು. ಕಡೆಗೆ ನಾನಕನ ಇಷ್ಟದಂತೆ ಎಲ್ಲ ಬಂದಿಗಳನ್ನೂ ಬಿಡುಗಡೆ ಮಾಡಿ ಬಾಬರನು ಆ ಗುರುವನ್ನು ತನ್ನ ಬಳಿ ಕೆಲವು ದಿನಗಳಿರುವಂತೆ ಪ್ರಾರ್ಥಿಸಿದನು. ಅದರಂತೆ ರಾಜಧಾನಿ ಯಲ್ಲಿ ಗುರುವು ಮೂರು ದಿನಗಳಿದ್ದು ಯವನ ರಾಜನು ಧರ್ಮ ಮಾರ್ಗದಲ್ಲಿ ನಡೆಯುವಂತೆಯೂ, ಸಜ್ಜನರನ್ನು ಗೌರವಿಸುವಂತೆಯೂ, ದೇವರಲ್ಲಿ ಭಕ್ತಿ ಯಿಡುವಂತೆಯೂ ಉಪದೇಶಿಸಿ, ಬಾಬರನಿಗೆ ಸದ್ಬುದ್ಧಿ ಬರುವಂತೆ ಮಾಡಿದನು.

ವೃದ್ಧಾಪ್ಯದಲ್ಲಿ ನಾನಕನು ತನ್ನ ಕುಟುಂಬ ವರ್ಗದವರೊಡನೆ ಖರತ್ಪುರ ದಲ್ಲಿ ನೆಲಸಿದ್ದನು. ಪ್ರತಿ ದಿನವೂ ಈತನು ನಡೆಸುತ್ತಿದ್ದ ದೈವ ಪ್ರಾರ್ಥ ನೆಯ ವೇಳೆಯಲ್ಲಿ ನೂರಾರು ಮಂದಿ ನೆರೆಯುತ್ತಿದ್ದರು. ಅವರು ಭಕ್ತಿ ಯಿಂದ ಕೊಡುತ್ತಿದ್ದ ವಸ್ತುಗಳನ್ನು ಬಡಬಗ್ಗರಿಗೆ ಹಂಚುತ್ತಿದ್ದನು. ಜನಗಳಿಗೆ ಧರ್ಮಬೋಧೆ ಮಾಡುತ್ತಿದ್ದನು. ಸರ್ವೇಶ್ವರನನ್ನು ಭಕ್ತಿಯಿಂದ ಪ್ರಾರ್ಥಿಸ ಬೇಕೆಂಬುದು ನಾನಕನ ತತ್ವವಾಗಿತ್ತು.

ಹೀಗಿರಲು ನಾನಕನಿಗೆ ಮುಂಚೆಯೇ ಅವನ ಪ್ರಿಯಶಿಷ್ಯನಾದ ಮರ್ದನನು ಮೃತಿ ಹೊಂದಿದನು. ನಾನಕನಿಗೆ ಇಬ್ಬರು ಮಕ್ಕಳಿದ್ದರೂ ಅವರಿಗೆ ಯೋಗ್ಯತೆ ಸಾಲದಿದ್ದುದರಿಂದ, ತನ್ನ ತರುವಾಯ ಅಂಗದನೆಂಬ ದಕ್ಷನಾದ ಶಿಷ್ಯನನ್ನು ಪೀಠಕ್ಕೆ ಬರುವಂತೆ ನಿಯಮಿಸಿದನು. ನಾನಕನನ್ನು ಹಿಂದುಗಳಷ್ಟೆ ಮುಹಮ್ಮದೀಯರೂ ಪ್ರೀತಿಸುತ್ತಿದ್ದುದರಿಂದ ಆತನ ಅವಸಾನ ಸಮಯ ಬಂದಾಗ ಆತನ ದೇಹವು ಸಂಸ್ಕಾರಕ್ಕೆ ಯಾರಿಗೆ ಸೇರಬೇಕೆಂಬ ವಿಚಾರದಲ್ಲಿ ವಿವಾದ ಬಂದಿತು. ಆಗ ನಾನಕನು ಉಭಯಪಕ್ಷದವರಿಗೂ ಒಂದೊಂದು ಪುಷ್ಪವನ್ನು ತರಹೇಳಿ, ಅವುಗಳನ್ನು ತನ್ನ ಮೇಲಿಡುವಂತೆಯೂ, ಯಾರ ಪುಷ್ಪವು ಬಾಡದಿರುವುದೋ ಅವರಿಗೆ ತನ್ನ ದೇಹವು ಸಂಸ್ಕಾರಕ್ಕೆ ಸೇರಲು ತಕ್ಕದೆಂದೂ ತಿಳಿಸಿದನು. ಅದರಂತೆಯೇ ನಾನಕನು ಈ ಲೋಕ ದಿಂದ ಕಣ್ಮರೆಯಾಗುವ ಮೊದಲನೆಯ ದಿನ ಎರಡು ಪಂಗಡದವರೂ ಆತನು ಮಲಗಿದ್ದ ಹೊದಿಕೆಯ ಮೇಲೆ ಎಡಬಲ ಭಾಗಗಳಲ್ಲಿ ಒಂದೊಂದು ಹೂವ ನ್ನಿಟ್ಟು ಬಂದರು. ಮಾರನೆಯ ಬೆಳಗ್ಗೆ ಎಲ್ಲರೂ ಸೇರಿ ನಾನಕನ ಹೊದಿಕೆ ಯನ್ನು ತೆಗೆದು ನೋಡಿದಾಗ, ಗುರುವಿನ ಶರೀರ ಮಾಯವಾಗಿ ಕೇವಲ ಪುಷ್ಪರಾಶಿ ಮಾತ್ರವಿದ್ದುದನ್ನು ಕಂಡು, ಎಲ್ಲರೂ ಪರಮಾಶ್ಚರ್ಯಪಟ್ಟರು. ಆಗ ಹಿಂದುಗಳೂ, ಮುಹಮ್ಮದೀಯರೂ, ಆ ದಿವ್ಯವಾದ ಪುಷ್ಪಗಳನ್ನು ಪ್ರೀತಿ ಯಿಂದ ತೆಗೆದುಕೊಂಡು ಹೋಗಿ, ರಾವಿ ನದಿಯ ದಡದಮೇಲೆ ಕ್ರಮವಾಗಿ ವೃಂದಾವನ ಮತ್ತು ಗೋರಿಗಳರೆಡನ್ನೂ ಕಟ್ಟಿಸಿದರು. ಹೀಗೆ ಗುರುನಾನಕನು ಅರವತ್ತೊಂಭತ್ತು ವರುಷಕಾಲ ಜೀವಿಸಿದ್ದು ಸಿಕ್ ಮತಸ್ಥಾಪನೆಗೆ ಕಾರಣ ನಾಗಿ ಹಿಂದೂ ಮತ್ತು ಮುಸಲ್ಮಾನ್ ಬಾಂಧವರೆಲ್ಲರಿಂದಲೂ ಗೌರವಿಸ ಲ್ಪಟ್ಟನು.

ಗುರುನಾನಕನ ತರುವಾಯ ಅಂಗದ, ಅಮರದಾಸ, ರಾಮದಾಸ,

ಅರ್ಜುನ, ಹರಗೋವಿಂದ, ಹರರಾಯ್, ಹರಕಿರ್ಷ, ತೇಗ್ ಬಹದ್ದೂರ್ ಮತ್ತು ಗೋವಿಂದ ಸಿಂಗರೆಂಬ ಒಂಭತ್ತು ಮಂದಿ ಗುರುಗಳು ನಾನಕನ ಪೀಠಕ್ಕೆ ಬಂದು ಸಿಕ್ ಮತವನ್ನು ಬಹುವಾಗಿ ವೃದ್ಧಿಪಡಿಸಿದರು. ಕೊನೆಯ ಗುರು ಗೋವಿಂದ ಸಿಂಗನು ರಣವೀರನೂ ಮತ್ತು ಧರ್ಮವೀರನೂ ಆಗಿದ್ದನೆಂಬ ವಿಚಾರವು ಚರಿತ್ರಾರ್ಹವಾಗಿದೆ.

" ಪ್ರಪಂಚಕ್ಕೆಲ್ಲಾ ಸರ್ವಶಕ್ತನೂ, ಸರ್ವೇಶ್ವರನೂ ಮತ್ತು ಸರ್ವಾಂತರ್ಯಾಮಿಯೂ ಆದವನು ದೇವರು ಒಬ್ಬನೇ. ಆತನನ್ನು ಭಕ್ತಿಯಿಂದ ಭಜಿಸುವುದು ಎಲ್ಲರ ಕರ್ತವ್ಯ. ಸಜ್ಜನ ಸಹವಾಸ, ಸತ್ಯಸಂಕಲ್ಪ ತೃಪ್ತಿ ಮತ್ತು ಇಂದ್ರಿಯ ನಿಗ್ರಹಾದಿಗಳಿಂದ ಮನುಷ್ಯನಿಗೆ ಪುಣ್ಯವುಂಟು " —ಹೀಗೆಂಬುದು ಸಿಕ್ ಮತದ ಮುಖ್ಯ ತತ್ವಾಂಶಗಳು.

# ಶ್ರೀ ಬಸವೇಶ್ವರ

ನಮ್ಮ ಕನ್ನಡನಾಡಿನಲ್ಲಿ ಜೈನ ಕ್ರೈಸ್ತ ಇಸ್ಲಾಂ ಧರ್ಮಗಳಿರುವಂತೆಯೇ 'ವೀರಶೈವ ಧರ್ಮವೂ ಪ್ರಸಿದ್ಧವಾಗಿರುವುದಷ್ಟೆ. ಈ ಪಂಗಡಕ್ಕೆ ಸೇರಿದವರು ಶಿವನೇ ಪರದೇವತೆಯೆಂದೂ, ಆತನ ಭಕ್ತರು ಶಿವಶರಣರೆಂದೂ ಭಾವಿಸಿ ಪೂಜಿಸುತ್ತಾರೆ. ಈ ಪಂಗಡದವರನ್ನು ಲಿಂಗವಂತರೆಂಬುದಾಗಿಯೂ ಕರೆಯುತ್ತಾರೆ. ವೀರಶೈವ ಮತವನ್ನು ಪುನರುದ್ಧಾರ ಮಾಡಿದವರು ಬಸವಣ್ಣನವರು. "ವೇದವಿಹಿತವಾದ ಕರ್ಮಗಳನ್ನು ಮಾಡದೆ ಮನುಷ್ಯನು ಭಕ್ತಿಯ ಮೂಲಕ ಆತ್ಮೋನ್ನತಿ ಸಾಧಿಸಬಹುದು" ಎಂಬ ದಾರಿಯನ್ನು ಬಸವಣ್ಣನವರು ಕಂಡು ಹಿಡಿದು ತಾವು ಮೊದಲು ಆಚರಿಸಿ ಜನರಿಗೆ ತೋರಿಸಿಕೊಟ್ಟರು. ಮೇಲಾಗಿ ಇವರು ಕನ್ನಡದಲ್ಲಿ ಹೊಸದಾದ ವಚನಕಾವ್ಯಗಳನ್ನೂ ಬರೆದು ಕನ್ನಡ ನಾಡಿಗೂ ನುಡಿಗೂ ಸಾಕಷ್ಟು ಸೇವೆ ಸಲ್ಲಿಸಿರುತ್ತಾರೆ. ಈ ವಚನಗಳು ವಿಶೇಷ ತತ್ತ್ವಗಳನ್ನು ಸಾರುವುದಲ್ಲದೆ, ಉಪದೇಶಾತ್ಮಕವಾಗಿಯೂ ಅಭ್ಯಾಸ ಮಾಡುವವರಿಗೆ ಸರಳವೂ ಸುಲಭವೂ ಆಗಿ ಕನ್ನಡಿಗರ ಮೆಚ್ಚುಗೆಗೆ ಪಾತ್ರವಾಗಿವೆ. ಬಸವಣ್ಣನವರು ಕೂಡಲ ಸಂಗಮನಲ್ಲಿಟ್ಟಿದ್ದ ಅಪರಿಮಿತವಾದ ಭಕ್ತಿ, ಸಾಮಾನ್ಯ ಮಾನವರ ಅಳತೆಗೆ ಅಗೋಚರವಾದುದು. ಆದುದರಿಂದಲೇ ಭಕ್ತಿಭಂಡಾರಿ ಬಸವಣ್ಣನವರು" ಎಂದು ಇವರು ಪ್ರಸಿದ್ಧರಾಗಿರುವರು. ಬಸವಣ್ಣನವರ ಜೀವನ ಚರಿತ್ರೆಯಿಂದ ಅವರು, ಕ್ರಿಸ್ತ, ಬುದ್ಧ, ಶಂಕರ ಮುಂತಾದ ಮಹಾಪುರುಷರ ಸಾಲಿಗೆ ಸೇರಿದವರೆಂದು ತಿಳಿದುಕೊಳ್ಳಬಹುದು ಬಸವಪುರಾಣ ವೃಷಭೇಂದ್ರ ವಿಜಯ, ಮಲಬಸವಪುರಾಣ ಮುಂತಾದ ಗ್ರಂಥಗಳು ಬಸವೇಶ್ವರರ ಚರಿತ್ರೆಯನ್ನು ವಿವರವಾಗಿ ತಿಳಿಸುತ್ತವೆ.

ಪುರಾಣಗಳು ಬಸವಣ್ಣನು ಅವತರಿಸುವುದಕ್ಕೆ ಬೇರೆ ಬೇರೆ ಕಾರಣಗಳನ್ನು ತಿಳಿಸುತ್ತವೆ. ನಂದೀಶ್ವರನ ಅವತಾರವೆಂದು ವೀರಶೈವ ಗ್ರಂಥಗಳು ತಿಳಿಸುತ್ತವೆ. ಬೊಂಬಾಯಿ ಪ್ರಾಂತ್ಯದ ಬಿಜಾಪುರಕ್ಕೆ ಸಮೀಪದಲ್ಲಿ ಬಾಗೇವಾಡಿ ಎಂಬ ತಾಲ್ಲೂಕಿನಲ್ಲಿ ಮಾದರಸ ಮತ್ತು ಮಾದಲಾಂಬಿಕೆ ಎಂಬ ಶೈವ

ಬ್ರಾಹ್ಮಣ ದಂಪತಿಗಳಿದ್ದರು. ಅವರಿಗೆ ಬಹಳ ದಿನ ಸಂತಾನವಾಗಿರಲಿಲ್ಲ. ಶಿವಾರ್ಚನೆಯ ಫಲದಿಂದ ಆ ದಂಪತಿಗಳಿಗೆ ಕ್ರಿ.ಶ. ೧೧೩೨ರಲ್ಲಿ ಬಸವಣ್ಣನವರು ಹುಟ್ಟಿದರು. ಹುಟ್ಟಿದ ಮಕ್ಕಳು ಒಡನೆ ಅಳುವುದು ಸ್ವಭಾವ. ಆದರೆ ಬಸವೇಶ್ವರರು ಹುಟ್ಟಿದೊಡನೆ ಅಳಲಿಲ್ಲ, ನಗಲಿಲ್ಲ, ಆಡಲಿಲ್ಲ. ತಾಯಿತಂದೆಗಳಿಗೆ ಈ ರೀತಿಯ ಶಿಶುವನ್ನು ನೋಡಿ ಚಿಂತೆಗೆ ಇಟ್ಟುಕೊಂಡಿತು. ಮಗುವಿನ ಭವಿಷ್ಯಕ್ಕಾಗಿ ಅನೇಕ ವ್ರತಗಳನ್ನಾಚರಿಸಿದರು. ಕಂಡ ಕಂಡ ದೇವತೆಗಳಿಗೆಲ್ಲಾ ನಮಸ್ಕರಿಸಿ ಹರಕೆ ಹೊತ್ತರು. ಹಠಾತ್ತಾಗಿ ಬಾಗೇವಾಡಿಗೆ ಬಂದ ಜಾತವೇದ ಮುನಿಗಳು ಕಲ್ಲಿನಂತೆ ಜಡವಾಗಿ ಬಿದ್ದಿದ್ದ ಮಗುವನ್ನು ಚೆನ್ನಾಗಿ ಪರೀಕ್ಷಿಸಿ. "ಈ ಮಗುವಿಗೆ ಉಜ್ವಲ ಭವಿಷ್ಯವಿದೆ. ಸಮಾಜದಲ್ಲಿ ದೊಡ್ಡ ಕೀರ್ತಿಗೆ ಪಾತ್ರವಾಗುತ್ತದೆ ನೀವು ಇದಕ್ಕಾಗಿ ಚಿಂತಿಸಬೇಕಾದುದಿಲ್ಲ" ಎಂದು ಸಮಾಧಾನ ಹೇಳಿ ಹೊರಟುಹೋದರು.

ಮಗುವಾಗಿ ದಿನದಿನಕ್ಕೆ ಬೆಳೆಯುತ್ತಲೇ, ಬಸವಣ್ಣನವರು ಅನೇಕ ಸಂಗಡಿಗರೊಡನೆ ಆಟಪಾಟಗಳಲ್ಲಿ ಭಾಗವಹಿಸುವರು. ಸಂಗಡಿಗರು ಕುಣಿಯುತ್ತಾ, ಹರ್ಷದಿಂದಿರುತ್ತಿರಲು ಅವರು ಎಲ್ಲರ ಸಂಗಡ ಬಿಟ್ಟು ದೂರ ಹೋಗಿ ಕುಳಿತು ಕೊಳ್ಳುವರು. ಮನಸ್ಸಿನಲ್ಲಿ ಏನನ್ನೋ ಯೋಚಿಸುವರು, ಏನನ್ನೋ ತಮ್ಮಲ್ಲಿ ತಾವೇ ಮಾತಾಡಿಕೊಳ್ಳುವರು. ಹೀಗೆ ಬಾಲ್ಯದಲ್ಲಿ ವಿಚಿತ್ರವ್ಯಕ್ತಿಯಾಗಿಯೇ ಕಾಣುತ್ತಿದ್ದರು.

ಬಸವಣ್ಣನವರಿಗೆ ಎಂಟನೆಯ ವಯಸ್ಸು ಸಮೀಪಿಸಿತು. ಮಾದರಸನು ಬ್ರಾಹ್ಮಣ ಸಂಪ್ರದಾಯದಂತೆ ಮಗುವಿಗೆ ಉಪನಯನ ಮಾಡಲು ಲಗ್ನ ನಿಶ್ಚಯಿಸಿದನು. ಬಂಧು ಬಳಗದವರೆಲ್ಲರೂ ಬಂದಿದ್ದರು ಆ ಸಮಯದಲ್ಲಿ ಬಸವನ ಸೋದರಮಾವ ಬಲದೇವನು ಜೈನರಾಜನಾದ ಬಿಜ್ಜಳನಲ್ಲಿ ಮಂತ್ರಿಯಾಗಿದ್ದನು. ಅವನೂ ಸಹ ಉಪನಯನಕ್ಕಾಗಿ ಬಂದನು. ಆದರೆ ಬಸವಣ್ಣನವರಿಗೆ ಕರ್ಮ ಬಂಧನದಲ್ಲಿ ಸಿಕ್ಕಿಕೊಳ್ಳಲು ಸ್ವಲ್ಪವೂ ಇಷ್ಟವಿರಲಿಲ್ಲ. ತನಗೆ ಖಂಡಿತ ಉಪನಯನ ಬೇಕಾಗಿಲ್ಲವೆಂದು ನಿರಾಕರಿಸಿದನು. ಎಷ್ಟು ಸಮಾಧಾನ ಹೇಳಿದರೂ ತಂದೆ ತಾಯಿಗಳ ಪ್ರಯತ್ನ ನಡೆಯಲಿಲ್ಲ. ಅದಕ್ಕೆ ಸರಿಯಾಗಿ ಸ್ವಲ್ಪಕಾಲದಲ್ಲಿಯೇ ಬಸವಣ್ಣನ ಮಾತಾ ಪಿತೃಗಳು ತೀರಿಹೋದರು.

ಸಾಮಾನ್ಯವಾಗಿ ಅನಾಥಬಾಲಕರು ಸಾಮಾನ್ಯ ಬಾಲಕರಾಗಿ ಉಳಿಯುವುದಿಲ್ಲ. ಬುದ್ಧನು ಮಗುವಾಗಿದ್ದಾಗಲೇ ತಾಯಿಯನ್ನು ಕಳೆದು

ಕೊಂಡನು. ಚಂದ್ರಹಾಸನು ಬಾಲ್ಯದಲ್ಲೇ ತಾಯಿ ತಂದೆಗಳನ್ನು ಕಳೆದು ಕೊಂಡನು, ಇವರಿಬ್ಬರೂ ಐತಿಹಾಸಿಕ ಪುರುಷರಾದರು. ಹಾಗೆ ಬಾಲ್ಯದಲ್ಲಿ ಅನಾಥರಾಗುವುದೂ ಮುಂದೆ ಮಹಾಪುರುಷನಾಗುವುದಕ್ಕೆ ಸೂಚನೆಯೆಂಬು ದಾಗಿ ಕಾಣುತ್ತದೆ. ಐದು ವರ್ಷದ ಹಸುಳೆ ಧ್ರುವನಿಗೆ ಸಂಸಾರ ಬಂಧನದ ವಿಮೋಚನೆಯ ಮಾರ್ಗ ಹೊಳೆದಂತೆ, ಬಸವಣ್ಣನವರಿಗೂ ಶಿವಾರ್ಚನೆಯ ಮೂಲಕ ತತ್ವವನ್ನು ಸಾಧಿಸಿ, ಭವಬಂಧನದ ವಿಮೋಚನೆಯ ಮಾರ್ಗವನ್ನು ಹುಡುಕಬೇಕೆಂದು ಹೊಳೆಯಿತು. ಗತಿಸಿದ ತಾಯಿ–ತಂದೆಗಳಿಗಾಗಿ ಅವರು ದುಃಖಿಸಲಿಲ್ಲ. ಮನೆ–ಮಠ–ಐಶ್ವರ್ಯಕ್ಕಾಗಿ ಚಿಂತಿಸಲಿಲ್ಲ. ಬಂಧು–ಬಳಗ ಗಳನ್ನು ಹಿಂತಿರುಗಿ ನೋಡಲಿಲ್ಲ. ಸದ್ಗುರುವನ್ನು ಹುಡುಕುತ್ತಾ ಬಸವಣ್ಣ ನವರು, ಬಾಗೇವಾಡಿಯಿಂದ ಹೊರಟು ಕೃಷ್ಣಾ–ಮಲಪ್ರಭಾ ನದಿಗಳ ಸಂಗಮ ಕ್ಷೇತ್ರದಲ್ಲಿ ಶಿಷ್ಯರಿಗೆ ಉಪದೇಶ ಮಾಡುತ್ತಿದ್ದ ಜಾತವೇದ ಮುನಿಗಳ ಸಮೀಪವನ್ನು ಸೇರಿ ಶಿಷ್ಯವೃತ್ತಿಯನ್ನವಲಂಬಿಸಿದರು.

ಬಸವಣ್ಣನವರಿಗೆ ವಿದ್ಯಾರ್ಜನೆಯಲ್ಲಿಯೂ. ತತ್ವ ಸಾಧನೆಯಲ್ಲಿಯೂ ಕಾತುರವಿದ್ದಂತೆ, ದೇವನ ಒಲವನ್ನು ಸಂಪಾದಿಸುವುದರಲ್ಲಿಯೂ ಕಾತುರತೆ ಇತ್ತು. ಆಗ ಕಪ್ಪಡಿ ಸಂಗಮದಲ್ಲಿ ಕೂಡಲಸಂಗನ ಸಾನ್ನಿಧ್ಯದಿಂದ ಭವ್ಯತೆ ಯನ್ನು ಪಡೆದಿದ್ದ ಶಿವಾಲಯವೊಂದು ಅವರ ಕಣ್ಣಿಗೆ ಬಿತ್ತು. ಕೂಡಲೇ ಅವರ ಆನಂದಕ್ಕೆ ಪಾರವಿಲ್ಲವಾಯಿತು. ಬಸವಣ್ಣನವರಿಗೆ ಕೂಡಲಸಂಗ ಮೇಶ್ವರ ಸಾಮಾನ್ಯ ಜನಕ್ಕೆ ತೋರುವಂತಹ ಶಿಲೆಯ ಅಂಗವಾಗಿರಲಿಲ್ಲ. ಪ್ರೀತಿಯ ಸ್ನೇಹಿತ, ತಂದೆ–ತಾಯಿ–ಬಂಧು–ಎಲ್ಲವೂ ಕೂಡಲಸಂಗನೇ ಆಗಿದ್ದನು. ಬಸವಣ್ಣನವರು ಕೂಡಲಸಂಗನ ಆರಾಧನೆಯಲ್ಲಿ ನಿರತರಾದರು. ನಿತ್ಯವೂ ಪ್ರಭಾತ ಸಮಯಕ್ಕೆ ಎದ್ದು ಮಿಂದು, ಹಣೆಗೆ ವಿಭೂತಿ ಧರಿಸಿ, ಕೂಡಲಸಂಗನ ಅಭಿಷೇಕಕ್ಕೆ ನೀರನ್ನು ತರಲು ಕಂಬಿಯನ್ನು ಹೊತ್ತು ಹೊರಡುತ್ತಿದ್ದರು. ದಾರಿಯಲ್ಲಿ ಬರುತ್ತಾ ಹೂದೋಟವನ್ನು ಪ್ರವೇಶಿಸಿ ದುಂಬಿಗಳು ಕುಳಿತಿರದ, ಗಾಳಿಯಿಂದಲುಗದ, ಸೂರ್ಯರಶ್ಮಿಯಿಂದ ಬಾಡದ, ಸುವಾಸನೆಯಿಂದೊಪ್ಪುವ ಹೊನ್ನೆ ಕೇದಗೆ ಮುಂತಾದ ನಾನಾವಿಧ ಪುಷ್ಪ ಗಳನ್ನು, ಕೊಯ್ದುಕೊಂಡು ಅಲ್ಲಿಂದ ನದಿಗೆ ಹೋಗಿ ತಿಳಿಯಾದ ತೀರ್ಥ ವನ್ನೂ ತೆಗೆದುಕೊಂಡು ಬಂದು ಈಶ್ವರನ ಆರಾಧನೆಗೆ ಆರಂಭಿಸುತ್ತಿದ್ದರು. ತಾವು ತಂದ ಹೂಗಳಿಂದ ಕೂಡಲಸಂಗನನ್ನು ಸಿಂಗರಿಸಿ ಕಣ್ಮನ ತೃಪ್ತಿ

ಯಾಗುವತನಕ ನೋಡುತ್ತಿದ್ದರು ತಮ್ಮ ಮನದಲ್ಲಿರುವುದನ್ನು ಅವನ ಮುಂದೆ ಹೇಳಿಕೊಳ್ಳುತ್ತಿದ್ದರು ಅವನೊಡನೆ ನಗುತ್ತಿದ್ದರು, ಅಳುತ್ತಿದ್ದರು, ಸರಸಸಲ್ಲಾಪ ಮಾಡುತ್ತಾ ತಮ್ಮ ತಪ್ಪನ್ನು ಮನ್ನಿಸಬೇಕೆಂದು ಬೇಡುತ್ತಿದ್ದರು. ಕೂಡಲಸಂಗನು ಮಾತನಾಡದಿದ್ದರೂ, ಬಸವಣ್ಣನವರು ಆಪ್ತಗೆಳೆಯನೊಡನೆ ತಾನು ಮಾತಾಡುತ್ತಿರುವಂತೆಯೂ, ಅದರಿಂದ ಅವನು ಆನಂದ ಪಟ್ಟಿರುವನೆಂದೂ ಭಾವಿಸಿ ತಾವೂ ಸಂತಸದಿಂದ ಕಾಲ ತಳ್ಳುತ್ತಿದ್ದರು. ಇತ್ತ ವಿದ್ಯಾಭ್ಯಾಸ, ಅತ್ತ ಪ್ರಿಯಶಿವಲಿಂಗದ ಪೂಜೆ ಇವೆರಡು ಕಾರ್ಯಗಳೂ ನಡೆದವು, ಪ್ರಿಯಶಿಷ್ಯನ ಭವಿಷ್ಯವನ್ನು ಮೊದಲೇ ತಿಳಿದಿದ್ದ ಜಾತವೇದ ಮುನಿಗಳು ಶಿಷ್ಯರಿಗೆ ಕಲಿಸಿಕೊಡಬೇಕಾದ ಭಾಗಗಳನ್ನು ಕಲಿಸಿದರು. ಹದಿನೆಂಟು ವರ್ಷಗಳಕಾಲ ವಿದ್ಯಾಭ್ಯಾಸ ನಡೆಯಿತು.

ಅಲ್ಲಿಗೆ ಬಸವಣ್ಣನವರ ವಿದ್ಯಾಭ್ಯಾಸ ಮುಗಿಯಿತು. ಜನ್ಮತಃ ನಿಸರ್ಗವಾಗಿಯೇ ಬಂದ ಮುಖದ ತೇಜಸ್ಸು ತಾರುಣ್ಯದ ಶೋಭೆಯೊಡನೆ ಸೇರಿ ಇಮ್ಮಡಿಯಾಯಿತು. ಶಿಷ್ಯನಿಗೆ ಕಲಿಸಿದ ವಿದ್ಯೆಯು ಲೋಕಹಿತಕ್ಕಾಗಿ ವಿನಿಯೋಗವಾಗಬೇಕೆಂದೂ, ಅದಕ್ಕಾಗಿ ಶಿಷ್ಯನು ಸದ್ಗೃಹಸ್ಥನಾಗಬೇಕೆಂದೂ ಜಾತವೇದ ಮುನಿಗಳು ಯೋಚಿಸಿದರು. ಮುನಿಗಳ ಚಿಂತೆಗೆ ಸರಿಯಾಗಿ ಬಸವಣ್ಣನ ಸೋದರಮಾವ ಬಲದೇವನು ತನ್ನ ಮಗಳನ್ನೇ ಕೊಡಲು ಮುಂದೆ ಬಂದು ಮುನಿಗಳಲ್ಲಿ ಪ್ರಾರ್ಥಿಸಿದನು. ಬಲದೇವನ ಮಗಳು ಗಂಗಾಂಬಿಕೆಯ ಗುಣಶೀಲಗಳನ್ನು ಮುನಿಗಳು ವಿಮರ್ಶಿಸಿ ಬಸವಣ್ಣನವರಿಗೆ ಈಕೆಯೇ ಸಹಧರ್ಮಿಚಾರಿಣಿಯಾಗಲು ಅರ್ಹಳೆಂದು ನಿಶ್ಚಯಿಸಿ ಸಕಾಲದಲ್ಲಿ ಅವರ ವಿವಾಹಕ್ಕೆ ಏರ್ಪಾಡು ನಡೆಸಿದರು. ಅನಂತರ ಬಸವಣ್ಣನವರು ಹೆಚ್ಚುಕಾಲ ಗುರುಗಳ ಮತ್ತು ಕೂಡಲಸಂಗನ ಸಾನ್ನಿಧ್ಯದಲ್ಲಿರಲು ಸಾಧ್ಯವಾಗಲಿಲ್ಲ. ತಮ್ಮ ಜೀವನ ಯಾತ್ರೆ ನಡೆಸಲು ಅವರನ್ನು ಅಗಲಬೇಕಾದ ದಿನ ಬಂದಿತು. ಪ್ರಿಯಗುರುವಿನ ಮತ್ತು ಪ್ರಿಯಸ್ವಾಮಿ ಕೂಡಲಸಂಗನ ವಿರಹವನ್ನು ಸಹಿಸಲಾರದೆ ಬಸವಣ್ಣನವರ ಕಣ್ಣಲ್ಲಿ ನೀರು ಹರಿಯಿತು. ಗುರುಗಳ ಅಪ್ಪಣೆ ಪಡೆದು ಕೂಡಲಸಂಗನನ್ನಪ್ಪಿ ಬಸವಣ್ಣನವರು ಬಹಳ ಕಷ್ಟದಿಂದ ಅಲ್ಲಿಂದ ಕಾಲ್ದೆಗೆದು ಕಲ್ಯಾಣಕ್ಕೆ ಬಂದರು

ಕಲ್ಯಾಣದಲ್ಲಿ ಬಸವ–ಗಂಗಾಬಿಕೆಯರ ವಿವಾಹವು ವಿಜೃಂಭಣೆಯಿಂದ ನೆರವೇರಿತು. ನೂತನ ಮಡದಿಯೊಡನೆ ಸಂಸಾರ ಪ್ರಾರಂಭವಾಯಿತು.

ಬಸವಣ್ಣನವರು ಜೀವನಕ್ಕಾಗಿ ಬಿಜ್ಜಳನ ಆಸ್ಥಾನದಲ್ಲಿ ಕರಣಿಕವೃತ್ತಿಗೆ ಸೇರಿಕೊಂಡರು. ರಾಜಾಸ್ಥಾನದಲ್ಲಿ ನಿಸ್ಸ್ವಾರ್ಥತೆಯಿಂದ ತಮ್ಮ ಕೆಲಸವನ್ನು ನಿರ್ವಹಿಸಿದರು. ತನ್ನ ಜೀವನಕ್ಕೆ ಕಾರಣನಾದ ಬಿಜ್ಜಳರಾಜನಲ್ಲಿ ಬಹಳ ಗೌರವದಿಂದ ನಡೆದುಕೊಂಡರು. ಇದರಿಂದ ಸುಳ್ಳು ಲೆಕ್ಕ ಬರೆದು ರಾಜನನ್ನು ವಂಚಿಸಿ ಹಣಸಂಪಾದಿಸುತ್ತಿದ್ದ ಕೆಲವರಿಗೆ ಬಸವಣ್ಣನವರ ಸತ್ಯವಾದ ಮತ್ತು ನ್ಯಾಯವಾದ ಮಾರ್ಗವು ಅಂತಹವರ ಸಂಪಾದನೆಗೆ ಅಡ್ಡಿಯಾಯಿತು.

ಒಂದು ದಿನ ಆಕಸ್ಮಿಕವಾಗಿ ಯಾರಿಂದಲೂ ಓದಲಾಗದ ಲಿಪಿಯೊಂದು ರಾಜಾಸ್ಥಾನದಲ್ಲಿ ಬಂದು ಬಿದ್ದಿತು. ಸಭಾಸದರೂ ಲಿಪಿ ವಿಚಕ್ಷಣರೂ ಅದನ್ನು ಓದಲಾರದೆ ತಲೆ ತಗ್ಗಿಸಿದರು. ಬಸವಣ್ಣನವರು ಆ ಲಿಪಿಯನ್ನು ಓದಿಕೊಂಡು, ರಾಜನನ್ನು ರಹಸ್ಯವಾಗಿ ಕರೆದು ಲಿಪಿಯಲ್ಲಿ ಬರೆದಿರುವಂತೆ ವಿಪುಲ ನಿಕ್ಷೇಪವಿರುವ ಸ್ಥಳವನ್ನು ತೋರಿಸಿಕೊಟ್ಟರು. ಅಲ್ಲಿ ಅಗೆದು ನೋಡಲು ದೊಡ್ಡ ಸುವರ್ಣದ ರಾಶಿಯು ರಾಜನಿಗೆ ದೊರೆಯಿತು. ಬಸವಣ್ಣನವರ ಗುಣ–ಶೀಲಗಳನ್ನು ನೋಡಿ ರಾಜನೂ ಬೆರಗಾದನು. ಲಿಪಿಗೆ ಸುಳ್ಳು ಅರ್ಥವನ್ನು ಕಲ್ಪಿಸಿ, ನಿಧಿಯನ್ನು ತಾವೇ ಅಪಹರಿಸಲು ಅನುಕೂಲವಿದ್ದರೂ ಸಹ ಅದನ್ನು ತೃಣಕ್ಕೆ ಸಮಾನವಾಗಿ ಎಣಿಸಿದ ಬಸವಣ್ಣನವರಲ್ಲಿ ತಕ್ಷಣ ರಾಜನಿಗೆ ಪೂಜ್ಯಭಾವನೆ ಬೇರೂರಿತು. ರಾಜನು ಬಸವಣ್ಣನವರನ್ನು ಅಸಾಧಾರಣ ವ್ಯಕ್ತಿಯೆಂದು ಭಾವಿಸಿದನು. ಇಂತಹ ಮಹನೀಯರನ್ನು ಸಾಧಾರಣ ಕರಣಿಕ ವೃತ್ತಿಯಲ್ಲಿಡಬಾರದೆಂದು ತಿಳಿದು ರಾಜನು ಅವರಿಗೆ ದೊಡ್ಡ ಅಧಿಕಾರವನ್ನಿತ್ತು ಸನ್ಮಾನಿಸಿದನು. ರಾಜದತ್ತವಾದ ಅರಮನೆಯಲ್ಲಿ ವಾಸ. ಅಪರಿಮಿತವಾದ ಐಶ್ವರ್ಯ, ಅನುಕೂಲಳಾದ ಭಾರ್ಯೆ, ವಿಧೇಯರಾದ ಪರಿಚಾರಕರು, ಇಷ್ಟಿದ್ದರೂ ಬಸವಣ್ಣನವರು ತಮ್ಮ ಸೌಖ್ಯಕ್ಕೆ ಬಳಸಿಕೊಳ್ಳದೆ ಕೂಡಲಸಂಗನು ಕೊಟ್ಟ ಐಶ್ವರ್ಯವನ್ನು ಅವನಿಗೂ ಮತ್ತು ಅವನ ಭಕ್ತರಿಗೂ ಸಮರ್ಪಣೆ ಮಾಡುವುದೆಂದು ನಿಶ್ಚಯಿಸಿದರು. ಬಸವಣ್ಣನವರ ಮನೆಯು ದೀನ ದಲಿತರ ಭಿಕ್ಷುಕರ ಆಶ್ರಯ ಸ್ಥಾನವಾಯಿತು. ಇವರು ಕೇಳಿದವರಿಗೆ ಬೇಡಿದ್ದನ್ನು ನೀಡುವ ಕಾರ್ಯದಲ್ಲಿ ತೊಡಗಿದರು. ಬಸವಣ್ಣನವರ ತ್ಯಾಗವನ್ನು ಕಂಡು ರಾಜನಿಗೆ ಅವರಲ್ಲಿ ಇನ್ನೂ ಪ್ರೀತಿ ಗೌರವಗಳು ಹೆಚ್ಚುತ್ತಾ ಬಂದವು. ಅವರಿಬ್ಬರಲ್ಲಿ ಸ್ವಾಮಿ ಭೃತ್ಯ ಸಂಬಂಧವು ತಪ್ಪಿ ಗೆಳೆತನವಂಕುರಿಸಿತು. ಪ್ರತಿಯೊಂದು ರಾಜ್ಯಕಾರಕ್ಕೂ ರಾಜನು ಬಸವಣ್ಣನವರ ಸಲಹೆ ಕೇಳದೆ ಸ್ವತಂತ್ರಿಸಿ

ಮಾಡುತ್ತಿರಲಿಲ್ಲ. ಬಸವಣ್ಣನವರ ಅಭ್ಯುದಯವು ಆಸ್ಥಾನದಲ್ಲಿದ್ದ ಮಂಚಣ್ಣನೇ ಮುಂತಾದ ಅಧಿಕಾರಿಗಳಿಗೆ ಸಹಿಸಲಿಲ್ಲ. ಅಣ್ಣನವರನ್ನು ಕೆಳಕ್ಕೆ ತಳ್ಳಲು ಅವರು ಸಮಯ ಕಾಯುತ್ತಿದ್ದರು. ಈ ವೇಳೆಗೆ ಮಂತ್ರಿಯಾದ ಬಲದೇವನು ಸ್ವರ್ಗಸ್ಥನಾದನು. ಪ್ರಧಾನ ಪದವಿಯನ್ನು ಯಾರಿಗೆ ಕೊಡಬೇಕೆಂಬ ಚರ್ಚೆ ಬಂತು. ವಿರೋಧಿಗಳು ಬೇರೆ ಹೆಸರನ್ನು ತಿಳಿಸಿದರೂ ರಾಜನು ಅದಕ್ಕೆ ಕಿವಿಗೊಡದೆ ಬಸವಣ್ಣನವರಿಗೇ ಪ್ರಧಾನ ಪದವಿಯನ್ನಿತ್ತು ವಿಶೇಷವಾಗಿ ಸನ್ಮಾನಿಸಿದನು. ಇದೇ ಸಮಯದಲ್ಲಿ ರಾಜನು ಹಿಂದಿನ ಉಪಕಾರವನ್ನು ನೆನೆದು ದಂಡನಾಯಕನಾದ ಸಿದ್ಧರಸನ ಮಗಳಾದ ನೀಲಲೋಚನೆಯನ್ನು ಅವನ ಪ್ರಾರ್ಥನೆಯಂತೆ ಬಸವಣ್ಣನವರಿಗೆ ಕೊಟ್ಟು ವಿವಾಹ ಮಾಡಿಸಿದನು. ಈಗ ಅಣ್ಣನವರಿಗೆ ಇಬ್ಬರು ಸಹಧರ್ಮಿಣಿಯರಾದರು.

ಈಗ ಬಸವಣ್ಣನವರಿಗೆ ಶಿವಾರ್ಚನೆಯಲ್ಲಿಯೂ ಶರಣರ ಸತ್ಕಾರದಲ್ಲಿಯೂ ಭಾಗವಹಿಸಲು ಹೆಚ್ಚು ಸಮಯ ಸಿಗಲಿಲ್ಲ. ರಾಜ್ಯ ಸೂತ್ರವೆಲ್ಲಾ ಅವರ ಜವಾಬ್ದಾರಿಗೆ ಸೇರಿತು. ಪ್ರಜೆಗಳಿಗೆ ಹಿತವಾಗುವಂತೆ ರಾಜ್ಯಭಾರ ನಿರ್ವಹಿಸಬೇಕಾಯಿತು. ಮಧ್ಯೆ ವಿರೋಧಿ ವರ್ಗದವರಿಂದ ಬರುವ ಪ್ರತಿಬಂಧಕಗಳನ್ನು ನಿವಾರಿಸಿಕೊಂಡು ಅವರ ಇಂಗಿತಗಳನ್ನೂ ಅನುಸರಿಸಿ ಎಚ್ಚರಿಕೆಯಿಂದ ಹೆಜ್ಜೆಯಿಡಬೇಕಾಯಿತು. ಬಿಜ್ಜಳರಾಜನು ವೀರನಾದರೂ ರಾಜ್ಯಾಂಗರಚನೆಯಲ್ಲಿ ಚತುರನಾಗಿರಲಿಲ್ಲ. ಚಾಲುಕ್ಯ ರಾಜ್ಯವನ್ನು ತಾನು ಆಕ್ರಮಿಸಿಕೊಂಡಿದ್ದ ಕಾರಣ ಅವರ ಅಭಿಮಾನಿಗಳಿಂದ ರಾಜ್ಯಕ್ಕೆ ಭಯವೂ ಇತ್ತು. ಈ ಭಯದ ಪರಿಹಾರಕ್ಕಾಗಿ ಮತ್ತು ರಾಜ್ಯರಕ್ಷಣೆಗಾಗಿ ರಾಜನು ಒಂದೂವರೆ ಲಕ್ಷ ಸೈನ್ಯವನ್ನು ಕೂಡಿಸಿದ್ದನು. ಅಲ್ಲದೆ ವಿರೋಧಿ ವರ್ಗದವರು ರಾಜನ ಆದಾಯವನ್ನು ತಾವೇ ಕಿತ್ತುಕೊಂಡು ತಿಂದುಹಾಕುತ್ತಿದ್ದರು. ಅಧಿಕಾರಿಗಳು ಲಂಚಕೋರತನದಿಂದ ಕೊಬ್ಬಿದ್ದರು. ರಾಜನ ಬಂಧುವರ್ಗದಲ್ಲೂ ಮಿತವ್ಯಯವಿರಲಿಲ್ಲ. ಹೀಗಾಗಿ ರಾಜ್ಯದಲ್ಲಿ ಆದಾಯಕ್ಕಿಂತ ಖರ್ಚೇ ಅಧಿಕವಾಗಿತ್ತು. ಆಗ ಕಲ್ಯಾಣ ನಗರದಲ್ಲಿ ಹತ್ತು ಲಕ್ಷ ಪ್ರಜಾಸಂಖ್ಯೆಯಿತ್ತು. ಅವರ ರಕ್ಷಣೆ-ಪೋಷಣೆಗಳು ರಾಜನಿಗೇ ಸೇರಿತ್ತು. ಆಗ ತಾನೇ ಪ್ರಧಾನ ಪದವಿಯನ್ನು ಅಲಂಕರಿಸಿದ ಬಸವಣ್ಣನವರು ಮೇಲಿನ ಅನೇಕ ತೊಡಕುಗಳನ್ನು ಏಕಕಾಲದಲ್ಲಿ ಎದುರಿಸಬೇಕಾಯಿತು. ಹತ್ತು ವರ್ಷಗಳಕಾಲ

ಬಸವಣ್ಣನವರು ಅವಿಶ್ರಾಂತರಾಗಿ ದುಡಿದು ರಾಜ್ಯಭಾರ ಕ್ರಮವನ್ನು ಒಂದು ವ್ಯವಸ್ಥಿತವಾದ ಕ್ರಮಕ್ಕೆ ತಂದರು. ಅವರು ಗಣಿತದಲ್ಲಿಯೂ ಪಂಡಿತರಾದುದರಿಂದ ಅಧಿಕಾರಿಗಳು ಸುಳ್ಳು ಲೆಕ್ಕ ಬರೆದು ಅವರನ್ನು ಮೋಸಗೊಳಿಸಲು ಅವಕಾಶವಾಗಲಿಲ್ಲ. ರಾಜ್ಯದ ಪ್ರತಿಯೊಂದು ಕಾರ್ಯವೂ ಶಿಸ್ತಿನಿಂದ ನಡೆಯುವಂತೆ ಅವರು ಏರ್ಪಡಿಸಿದರು. ಹೀಗೆ ರಾಜ್ಯಭಾರಕ್ರಮವನ್ನು ಒಂದು ಶಿಸ್ತಿಗೆ ಒಳಪಡಿಸಿ ಅನೇಕ ಸುಧಾರಣೆಗಳನ್ನೂ ತಂದರು. ಮೊದಲು ವಿದ್ಯಾ ಪ್ರಚಾರದ ಕಡೆಗೆ ಗಮನವಿತ್ತರು. ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು ಅನೇಕ ವೃತ್ತಿ ಶಿಕ್ಷಣಾಲಯಗಳನ್ನು ತೆರೆದರು. ಹಳ್ಳಿಗರಿಗೆ ಓದು ಬರ ಕಲಿಸಲು ತಕ್ಕ ಏರ್ಪಾಡು ಮಾಡಿಸಿದರು. ಎಲ್ಲದಕ್ಕಿಂತ ಅವರು ಸ್ಥಾಪಿಸಿದ್ದ ಅನುಭವ ಮಂಟಪವು ಗ್ರಾಮಾಂತರಗಳಿಗೆ ಹೋಗುವ ಅಧ್ಯಾಪಕರ ಶಿಕ್ಷಣಕೇಂದ್ರವಾಗಿತ್ತು. ನೂರಾರು ಮಂದಿ ಶಿವಶರಣರೂ ಮತ್ತು ಅನುಭವಿಗಳೂ ಅಲ್ಲಿ ಶಿಕ್ಷಣ ಪಡೆದು ದೇಶ ದೇಶಗಳಲ್ಲೂ ಸಂಚರಿಸಿ ಜನರಿಗೆ ತಿಳುವಳಿಕೆ ಕೊಡುತ್ತಿದ್ದರು.

ಕೆಲಮಂದಿ ದೃಢಕಾಯರು ಭಿಕ್ಷುಕ ವೃತ್ತಿಯಿಂದ ಜೀವನ ತಳ್ಳುತ್ತಿದ್ದರು. ಇದು ಬಸವಣ್ಣನವರಿಗೆ ಸರಿಬೀಳಲಿಲ್ಲ. ಅದಕ್ಕಾಗಿ ಬಂಜರು ಬಿದ್ದಿದ್ದ ಭೂಮಿಯನ್ನು ಅವರಿಗೆ ಹಂಚಿಕೊಟ್ಟು ಬೇಸಾಯಕ್ಕೆ ಏರ್ಪಾಡು ಮಾಡಿ ಅವರ ಜೀವನಕ್ಕೆ ಅನುಕೂಲ ಪಡಿಸಿಕೊಟ್ಟರು. ಆಶ್ರಿತ ರಾಜರ ಆದಾಯದಲ್ಲಿ ಅರ್ಧ ಭಾಗವು ರಾಜನ ಕೋಶಕ್ಕೆ ಸೇರತಕ್ಕದೆಂದು ವಿಧಿಸಿದರು. ಸಂತತಿಯಿಲ್ಲದವರ ಆಸ್ತಿಗಳು ಬೇರೆ ಯಾರೂ ಹಕ್ಕುದಾರರಿಲ್ಲದ ಪಕ್ಷದಲ್ಲಿ ಸರ್ಕಾರಕ್ಕೆ ಸೇರತಕ್ಕದೆಂದು ಘೋಷಿಸಿದರು. ಭೂಗಂದಾಯವನ್ನು ನಿಷ್ಕರ್ಷಿಸಿ, ರಾಜ್ಯದ ಆದಾಯ ಹೆಚ್ಚುವಂತೆ ಮಾಡಿದರು. ಹಿಂದೂ ಸಮಾಜದಲ್ಲಿ ಬಹಳ ಕಾಲದಿಂದ ಬಂದಿದ್ದ ಅಸ್ಪೃಶ್ಯತೆಯನ್ನು ತೊಡೆದು ಹಾಕಿದರು. ಸಮಾಜದಲ್ಲಿ ಸ್ತ್ರೀಯರಿಗೂ ಸಮಾನ ಸ್ಥಾನವಿರಬೇಕೆಂದು ವಿಧಿಸಿದರು.

ಬಸವೇಶ್ವರರಿಗೆ ವೇಷಧಾರಿಗಳ ಮತ್ತು ಕಳ್ಳರ ಮನಸ್ಸನ್ನೂ ಮಾರ್ಪಡಿಸುವ ವಿಚಿತ್ರ ಶಕ್ತಿ ಇತ್ತು. ಒಂದುಬಾರಿ ಅವರ ಮನೆಗೆ ಕೆಲವು ವೇಷಧಾರಿಗಳು ಶಿವಶರಣರಂತೆ ತಾವೂ ಹೆಚ್ಚಿನ ಲಾಭ ಪಡೆಯಬೇಕೆಂಬ ಉದ್ದೇಶದಿಂದ ಬಂದರು. ಅವರಿಗೆ ಲಿಂಗದೊರೆಯದ ಕಾರಣ ಬದನೆಯಕಾಯ ಹೋಳು

ಗಳನ್ನು ಲಿಂಗದ ಹಾಗೆ ಕತ್ತಿಗೆ ಕಟ್ಟಿಕೊಂಡು ಬಂದಿದ್ದರು. ಬಸವಣ್ಣನವರಿಗೆ ಅವರ ಮೋಸ ಕೃತ್ಯವು ಗೊತ್ತಾದರೂ, ದಂಡನಾರ್ಹರಾದ ಅವರಿಗೆ ಶಿಕ್ಷೆ ವಿಧಿಸದೆ, ಅವರ ಬೇಡಿಕೆಯನ್ನು ಪೂರ್ಣಗೊಳಿಸಿ, ಅವರೆಲ್ಲಾ ನಿಜವಾದ ಶಿವ ಶರಣರಾಗುವಂತೆ ಮಾಡಿದರು.

ಮತ್ತೊಂದುಬಾರಿ ಕೆಲವು ಕಳ್ಳರು ಊರಿನ ಗೋವುಗಳನ್ನು ಕದ್ದೊಯ್ದರು. ತಕ್ಷಣವೇ ಇವರಿಗೆ ವರ್ತಮಾನ ಗೊತ್ತಾಯಿತು. ಇವರು ಕಳೆದು ಹೋದ ಗೋವುಗಳಿಗೆ ದುಃಖಿಸಲಿಲ್ಲವಾದರೂ, ಹಾಲಿಲ್ಲದೆ ಕೂಗಿಕೊಳ್ಳುತ್ತಿದ್ದ ಕರುಗಳಿಗಾಗಿ ಬಹಳ ಮರುಗಿದರು. ಕೂಡಲೇ ಅವರು ಆ ಕರುಗಳನ್ನೂ ಗೋವುಗಳ ಸಮೀಪಕ್ಕೆ ಬಿಟ್ಟುಬರುವಂತೆ ಕಳುಹಿಸಿಕೊಟ್ಟರು. ಇದರಿಂದ ಕಳ್ಳರ ಮನಸ್ಸು ಪರಿವರ್ತನೆಯಾಗಿ, ಅವರು ಕದ್ದ ಹಸುಗಳೊಡನೆ ಬಂದು, ಬಸವೇಶ್ವರರ ಕಾಲಿಗೆ ಬಿದ್ದರು. ಈ ದಯಾಳುವು ಅವರನ್ನು ಮನ್ನಿಸಿದರು.

ಎಲ್ಲಾ ಧರ್ಮಗಳ ಸಾರಾಸಾರವನ್ನೂ ವಿವೇಚನೆ ಮಾಡಲು ಶಿವಾನುಭವ ಮಂಟಪವನ್ನು ಸ್ಥಾಪಿಸಿದರು. ಈಶ್ವರನು ಅಲ್ಲಮಪ್ರಭುವಾಗಿಯೂ, ನಂದೀಶ್ವರನು ಬಸವೇಶ್ವರನಾಗಿಯೂ ಭೂಲೋಕದಲ್ಲಿ ಜನಿಸಿದಂತೆ ಶೈವ ಪುರಾಣಗಳಿಂದ ತಿಳಿದು ಬರುತ್ತವೆ. ಜ್ಞಾನ ವೈರಾಗ್ಯಗಳ ನಿಧಿ ಎನಿಸಿದ ಅಲ್ಲಮಪ್ರಭುಗಳು ಮಂಟಪದ ಅಧ್ಯಕ್ಷರಾಗಿದ್ದುದರಿಂದ ಅವರ ಮಹೋಪದೇಶಗಳು ಬಸವೇಶ್ವರರ ಮೇಲೆ ಪ್ರಭಾವ ಬೀರಿದ್ದಿತು. ಇದರಂತೆಯೇ ಚನ್ನಬಸವೇಶ್ವರ ಮತ್ತು ಸಿದ್ಧರಾಮಣ್ಣರೇ ಮೊದಲಾದ ಶೈವಭಕ್ತರ ಸತ್ಸಹವಾಸದಿಂದ ಬಸವೇಶ್ವರರಿಗೆ ಮಂಟಪದ ಮೇಲಿನ ವ್ಯಾಮೋಹ ಅತ್ಯಧಿಕವಾಯಿತು. ಇದಕ್ಕಾಗಿ ತಮ್ಮ ಐಶ್ವರ್ಯವನ್ನೆಲ್ಲಾ ವಿನಿಯೋಗಿಸಿದರು. ಈ ಮಂಟಪಕ್ಕೆ ಯಾರು ಬೇಕಾದರೂ ಪ್ರವೇಶ ಮಾಡಬಹುದಾಗಿತ್ತು. ಮೇಲು-ಕೀಳು ಎಂಬ ಭಾವನೆಗೆ ಅಲ್ಲಿ ಅವಕಾಶವಿರಲಿಲ್ಲ. ಧರ್ಮ ಜಿಜ್ಞಾಸುಗಳು ಇಲ್ಲಿ ಸೇರಿ ವಿಷಯಗಳನ್ನು ಚರ್ಚಿಸಿ ಒಂದು ಸಿದ್ಧಾಂತಕ್ಕೆ ಬರುತ್ತಿದ್ದರು.

ಸಮಯವನ್ನು ಕಾಯುತ್ತಿದ್ದ ವಿರೋಧಿಗಳು ರಾಜನಲ್ಲಿಗೆ ಹೋಗಿ ಬಸವಣ್ಣನವರು ಭಂಡಾರದಲ್ಲಿರುವ ಹಣವೆಲ್ಲವನ್ನೂ ವೀರಶೈವ ಮತಸ್ಥಾಪನೆಗಾಗಿಯೂ, ಶಿವಶರಣರ ಆತಿಥ್ಯಕ್ಕಾಗಿಯೂ ವಿನಿಯೋಗಿಸುತ್ತಿರುವರೆಂದು ಚಾಡಿ ಹೇಳಿದರು. ಅದರ ಸತ್ಯಾಂಶವನ್ನರಿಯದ ರಾಜನು ಮಂಟಪವನ್ನು

ಮುಚ್ಚಬೇಕೆಂದು ಬಸವಣ್ಣನವರಿಗೆ ಆಜ್ಞೆಯಿತ್ತನು. ಬಸವಣ್ಣನವರು ಪ್ರಾಣಕೊಡಲು ಸಿದ್ಧರಿದ್ದರೇ ಹೊರತು ಮಂಟಪ ಮುಚ್ಚಲು ಸಿದ್ಧರಿರಲಿಲ್ಲ. ಅದಕ್ಕಾಗಿ ತಮ್ಮ ಪ್ರಧಾನ ಪದವಿಗೇ ರಾಜೀನಾಮೆಯಿತ್ತರು. ಇದರಿಂದ ರಾಜನಿಗೆ ಸಮಾಧಾನವಾಗಲಿಲ್ಲ. ಚಾಡಿಕಾರರ ಮಾತಿಗೆ ಕಟ್ಟುಬಿದ್ದು ಒಬ್ಬ ಧರ್ಮಾತ್ಮನನ್ನು ಕಳೆದುಕೊಂಡೆನೆಂಬ ದುಃಖವಾಗಿ ಅವರ ಕಾಲಿಗೆ ಬಿದ್ದು ಪ್ರಧಾನಪದವಿಯನ್ನು ಪುನಃ ಸ್ವೀಕರಿಸಬೇಕೆಂದು ಬೇಡಿದನು. ಬಸವಣ್ಣನವರು ರಾಜನ ಆರ್ತತೆಯನ್ನು ನೋಡಿ ತಮ್ಮ ಸ್ಥಳದಲ್ಲಿ ಚೆನ್ನಬಸವಣ್ಣನನ್ನು ನಿಯಮಿಸುವುದೆಂದೂ, ಅವನನ್ನು ನಿಯಮಿಸಿದರೆ ತಾವೇ ಇದ್ದಂತಾಗುವುದೆಂದೂ ರಾಜನಿಗೆ ತಿಳಿಸಿ ಸಮಾಧಾನ ಪಡಿಸಿ ಕಳುಹಿಸಿಕೊಟ್ಟರು. ಇಷ್ಟಾದರೂ ತಮ್ಮ ಕೆಲಸ ಪೂರ್ತಿ ನೆರವೇರಲಿಲ್ಲವೆಂದು ಕಾಯುತ್ತಿದ್ದ ಬಸವಣ್ಣನವರ ವಿರೋಧಿಗಳು ರಾಜನಲ್ಲಿಗೆ ಪುನಃ ಬಂದು ಬಸವಣ್ಣನವರು ಶರಣರನ್ನು ಸೇರಿಸುವ ವ್ಯಾಜದಿಂದ ರಹಸ್ಯ ಸೇನೆ ಸೇರಿಸುತ್ತಿರುವರೆಂತಲೂ, ಸಿಂಹಾಸನವನ್ನಾಕ್ರಮಿಸಲು ಒಳಸಂಚು ನಡೆಸುತ್ತಿರುವರೆಂತಲೂ ಚಾಡಿ ಹೇಳಿದರು. ನಾನಾ ಕಡೆಯಿಂದ ಈ ಮಾತು ರಾಜನ ಕಿವಿಗೆ ಬಿತ್ತು. ಇದರಿಂದ ಸಿಟ್ಟುಗೊಂಡ ರಾಜನು ಬಸವಣ್ಣನವರ ಆಪ್ತರಾಗಿದ್ದ ಮಧುವರಸ ಮತ್ತು ಹರಳಯ್ಯ ಎಂಬುವರನ್ನು ಕೊಲೆಮಾಡಿಸಿದನು. ನಿರಪರಾಧಿಗಳ ಕೊಲೆಗಾಗಿ ಬಸವಣ್ಣನವರು ಬಹಳ ದುಃಖಿಸಿದರು. ಬಸವಣ್ಣನವರ ಕಡೆಯವರು ಹಿಂಸೆಗೆ ಪ್ರತಿಹಿಂಸೆ ಆಚರಿಸಲು ಸಿದ್ಧರಾದರು. ಪ್ರತಿಹಿಂಸೆ ಕೂಡದೆಂದು ತಮ್ಮ ಕಡೆಯವರಿಗೆ ತಿಳಿಸಿ, ಬಸವಣ್ಣನವರು ಆಗ ನಡೆದಿರುವ ಕೊಲೆಯ ಪ್ರಕರಣದಲ್ಲಿ ಕಲ್ಯಾಣ ಬಿಟ್ಟು ಹೊರಟು ಹೋಗುವುದೇ ಸರಿಯಾದ ಮಾರ್ಗವೆಂದು ಎಲ್ಲರಿಗೆ ಬುದ್ಧಿ ಹೇಳಿದರು. ತಮ್ಮ ಪ್ರಿಯಶಿಷ್ಯನಾದ ಚನ್ನಬಸವಣ್ಣನನ್ನು ಕರೆದು "ನಾನು ಮಾಡಬೇಕೆಂದಿದ್ದ ಮುಂದಿನ ಕಾರ್ಯವನ್ನು ನೀನು ನಡೆಸು" ಎಂದು ಹೇಳಿ ತಮ್ಮ ಮಡದಿಯರ ಸಮೇತರಾಗಿ ಸಂಗಮ ಕ್ಷೇತ್ರಕ್ಕೆ ಪ್ರಯಾಣ ಮಾಡಿದರು. ಪುಣ್ಯಪುರುಷನ ವಿರಹವನ್ನು ಸಹಿಸಲಾರದೆ ಊರಿನ ಹಿರಿಯರೂ, ಮಂಟಪದ ಕೆಲಸಕಾರ್ಯಗಳಲ್ಲಿ ನಿರತರಾದ ಶರಣರೂ ಸಹ ಬಹಳವಾಗಿ ಅತ್ತರು. ಮಧುವರಸನ ಕೊಲೆಯಾದುದೂ, ಬಸವಣ್ಣನವರು ಪ್ರಯಾಣ ಮಾಡಿದುದೂ ಶರಣರ ಸಮೂಹದಲ್ಲಿ ಕಳವಳಕ್ಕೆ ಕಾರಣವಾಯಿತು. ಇದರ ಪ್ರತಿಫಲವಾಗಿ ಮಲ್ಲಿಬೊಮ್ಮಣ್ಣ, ಜಗದೇವ

ಮುಂತಾದವರು ಪ್ರತಿಹಿಂಸೆಗೆ ಸಮಯ ಕಾಯುತ್ತಲೇ ಇದ್ದರು. ಅವರು ರಾಜನಿಗೆ ಸಮಿಾಪದ ಊಳಿಗದವರಾಗಿದ್ದರು. ಮೊದಲೇ ಮಾಡಿಕೊಂಡ ಸಂಚಿನಂತೆ, ಇವರಿಬ್ಬರೂ ಸೇರಿ ಒಂದು ದಿನ ರಾತ್ರಿ ರಾಜನನ್ನು ತೀರಿಸಿದರು. ಈ ವಾರ್ತೆಯನ್ನು ಕೇಳಿ ಕಲ್ಯಾಣ ನಗರವೇ ನಡುಗಿತು. ಮುಂದೆ ಶಿವ ಶರಣರಿಗೆ ಕಲ್ಯಾಣದಲ್ಲಿ ವಾಸಿಸಲು ಅವಕಾಶವಾಗದೆ, ಅವರೆಲ್ಲರೂ ತಂಡ ತಂಡವಾಗಿ ನಗರವನ್ನು ಬಿಟ್ಟು ಹೊರಟು ಹೋದರು. ಮಿಂಚಿನ ವೇಗದಲ್ಲಿ ರಾಜನ ಮರಣವಾರ್ತೆ ಸಂಗಮಕ್ಷೇತ್ರದಲ್ಲಿದ್ದ ಬಸವಣ್ಣನವರ ಕಿವಿಗೆ ಬಿತ್ತು. ತಮ್ಮ ಆಪ್ತಮಿತ್ರನ ಕೊಲೆಗಾಗಿ ಕಣ್ಣೀರು ಸುರಿಸಿದರು. ತಮ್ಮ ಕಡೆಯವ ರಿಂದಲೇ ನಡೆದ ಈ ಹಿಂಸೆಯನ್ನು ನೆನೆನೆನೆದು ಅಹಿಂಸಾವಾದಿಗಳಾದ ಬಸವಣ್ಣನವರು ಬಹು ನೊಂದರು. ಈ ಕೊರತೆಯಿಂದಲೇ ಅವರು ದಿನ ದಿನಕ್ಕೆ ಕೃಶರಾದರು. ಅವರಿಗೆ ಮನೋವ್ಯಥೆಯು ಹೆಚ್ಚಾದಕಾರಣ, ಬಹಳ ಕಾಲ ಬದುಕಲಿಲ್ಲ. ಬಸವಣ್ಣನವರ ಮೂವತ್ತಾರನೆಯ ವಯಸ್ಸಿನಲ್ಲಿ ಕ್ರಿ.ಶ. ೧೧೬೮ರಲ್ಲಿ ಲಿಂಗೈಕ್ಯರಾದರು.

ಬಸವಣ್ಣನವರು ಜೀವಿಸಿದ್ದುದು ಅತ್ಯಲ್ಪ ಕಾಲವಾದರೂ, ಅನೇಕ ಮಹತ್ಕಾರ್ಯಗಳನ್ನು ಸಾಧಿಸಿದರು. ಮಾನವ ಕಲ್ಯಾಣಕ್ಕಾಗಿ ಅನುಭವ ಮಂಟಪವನ್ನು ಸ್ಥಾಪಿಸಿದರು. ಕಾಯಕವೇ ಕೈಲಾಸವೆಂದು ಸಾರಿದರು. ಭಕ್ತಿಯೇ ಮುಕ್ತಿಗೆ ಸೋಪಾನವೆಂಬುದನ್ನು ತೋರಿಸಿಕೊಟ್ಟರು. ಸಮಾಜದ ಲೋಪದೋಷಗಳನ್ನು ಕಿತ್ತುಹಾಕಿ, ಶೈವಧರ್ಮವನ್ನು ಉಜ್ವಲಗೊಳಿಸಿದರು. ಇವರು ಲೋಕಕ್ಕೆ ನೀಡಿರುವ ವಚನಗಳು ಸಾರವತ್ತಾಗಿಯೂ, ನೀತಿ ಬೋಧಕಗಳಾಗಿಯೂ ಇವೆ.

"ದೇವನೊಬ್ಬ ನಾಮ ಹಲವು". ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಇಲ್ಲಿ ಸಲ್ಲದವರು ಎಲ್ಲಿಯೂ ಸಲ್ಲರು."........"ಅಯ್ಯಾ ಎಂದರೆ ಸ್ವರ್ಗ; ಎಲವೋ ಎಂದರೆ ನರಕ". ಇತ್ಯಾದಿ

ಬಸವೇಶ್ವರರು ತಮ್ಮ ಸರ್ವಸ್ವವನ್ನೂ ಕೂಡಲ ಸಂಗಮ ದೇವನಿಗೆ ಅರ್ಪಿಸಿದಂತೆ ಈ ಮುಂದಿನ ವಚನಗಳಿಂದ ಯಾರಿಗಾಗಲೀ ತಿಳಿಯದಿರದು—

"ತನು ನಿಮ್ಮದೆಂಬೆ; ಮನ ನಿಮ್ಮದೆಂಬೆ; ಧನ ನಿಮ್ಮದೆಂಬೆ; ಬಸವೇಶ್ವರರು ಮಹಾತ್ಯಾಗಿಗಳು, ಅನಾಥಬಂಧುಗಳು. ದಯಾಮಯರು. "ದಯವಿಲ್ಲದ ಧರ್ಮವಾವುದಯ್ಯ?"........ಹೀಗೆಂದು ಅವರು ಕೂಡಲ

ಸಂಗಮನನ್ನೇ ಪ್ರಶ್ನಿಸಿದ್ದಾರೆ. ಅವರ ಪರಿಪಕ್ವವಾದ ಭಕ್ತಿಗೆ ಮೆಚ್ಚಿದ ಕೂಡಲ ಸಂಗಮನು "ನೆನೆದರೆ ಮುಂದೆ ಬರುವೆ; ಕರೆದರೆ ಓ ಎನ್ನುವೆ; ನೀನು ನಿಂತಲ್ಲಿ ನಿಲುವೆ; ಬಂದಲ್ಲಿ ಬರುವೆ; ನಿನ್ನ ಪ್ರೈ ಮನದಲ್ಲಿ ನಾನಿರುವೆ" ಎಂದು ಅಭಯವಿತ್ತಿದ್ದಾನೆ. ಕತ್ತಲೆಯಲ್ಲಿರುವವರಿಗೆ ಬಸವಣ್ಣನವರ ವಚನಗಳು ಬೆಳಕನ್ನು ತೋರಿಸಿಕೊಡುತ್ತಿರುವುವು. ಹೀಗೆ ಕನ್ನಡ ನಾಡಿಗೂ ಮತ್ತು ನುಡಿಗೂ ಮಹೋಪಕಾರ ಮಾಡಿದ ಈ ಮಹಾತ್ಮರಾದ ಬಸವೇಶ್ವರರು ಚಿರಸ್ಮರಣೀಯರಾಗಿದ್ದಾರೆ.

# ಶ್ರೀಶಂಕರಾಚಾರ್ಯ

ನಮ್ಮ ಭರತಭೂಮಿ ಅನೇಕ ಪುಣ್ಯಪುರುಷರಿಗೆ ಜನ್ಮವಿತ್ತ ಪವಿತ್ರ ಕ್ಷೇತ್ರವಾಗಿದೆ. ಒಬ್ಬರ ಮೇಲೊಬ್ಬರು ಮಹಾತ್ಮರನ್ನು ಈ ಪುಣ್ಯಭೂಮಿಯಲ್ಲಿ ನಾವು ನೋಡುತ್ತಲೇ ಇರುತ್ತೇವೆ. ರಾಮ–ಕೃಷ್ಣಾದಿಗಳು ಅವತರಿಸಿ ಸನಾತನ ಧರ್ಮವನ್ನು ಸ್ಥಾಪಿಸಿದರು. ಅದಾದ ಮೇಲೆ ಅನೇಕ ಭಗವದ್ಭಕ್ತರು ಅವತರಿಸಿ ಸತ್ಪುರುಷರ ಅಭ್ಯುದಯದಲ್ಲಿಯೂ ಧರ್ಮಸ್ಥಾಪನ ಕಾರ್ಯಗಳಲ್ಲಿಯೂ ತೊಡಗಿದರು. ಜನರಲ್ಲಿ ಕಂಡುಬರುವ ಲೋಪದೋಷಗಳನ್ನು ತಿದ್ದಿ, ಅವರನ್ನು ಸುಸಂಸ್ಕೃತರನ್ನಾಗಿ ಮಾಡುವ ಉದ್ದೇಶದಿಂದಲೇ ಭಗವದಾಜ್ಞೆಯ ಪ್ರಕಾರ ಮಹಾತ್ಮರು ಈ ಲೋಕದಲ್ಲಿ ಅವತರಿಸಿದ ಈ ಎಲ್ಲ ಮಹನೀಯರೂ "ಸತ್ಯವನ್ನು ಹೇಳು, ಧರ್ಮವನ್ನಾಚರಿಸು, ಹಿಂಸೆಯನ್ನು ತ್ಯಜಿಸು, ಗುರುಹಿರಿಯರನ್ನು ಅನುವರ್ತಿಸು" ಇತ್ಯಾದಿ ಸದುಪದೇಶಗಳನ್ನು ತಮ್ಮ ಅಮೃತವಾಣಿಯಿಂದ ಸಾರಿರುತ್ತಾರೆ. ಕೆಲವರು ತಮ್ಮ ಅತ್ಯಲ್ಪ ಜೀವಿತ ಕಾಲದಲ್ಲಿಯೇ ಈ ಲೋಕದಲ್ಲಿ ಅನೇಕ ಮಹತ್ಕಾರ್ಯಗಳನ್ನು ಸಾಧಿಸಿದ್ದಾರೆ. ಬಸವಣ್ಣನವರು ಕೇವಲ ತಮ್ಮ ಮೂವತ್ತೆಂಟು ವರ್ಷದ ಆಯುಸ್ಸಿನಲ್ಲಿ ಅನೇಕ ವರ್ಷಗಳ ಕಾಲ ಪ್ರಯತ್ನ ಪಟ್ಟರೂ ಸಾಧಿಸಲಾಗದ ಮಹತ್ಕಾರ್ಯಗಳನ್ನು ಸಾಧಿಸಿ ಕೀರ್ತಿವೆತ್ತರು. ಹಾಗೆಯೇ ಶ್ರೀಶಂಕರರು ಬದುಕಿದ್ದುದು ಕೇವಲ ಮೂವತ್ತೆರಡು ವರ್ಷ ಮಾತ್ರ. ಇಷ್ಟು ಅಲ್ಪಕಾಲದಲ್ಲಿ ಜ್ಞಾನಾರ್ಜನೆ ಮಾಡಿ, ಅನೇಕ ಗ್ರಂಥಗಳನ್ನು ರಚಿಸಿ, ನಾನಾ ದೇಶಗಳಲ್ಲಿ ಪ್ರವಾಸ ಮಾಡಿ, ಪಂಡಿತ ಪಾಮರರಿಗೆ ಉಪದೇಶಾಮೃತವನ್ನು ಬೀರಿ ಸಮಾಜ ಸಂಸ್ಕರಣ ಮಾಡುವುದೆಂದರೆ ಅತಿಮಾನುಷ ಶಕ್ತಿಯೇ ಸರಿ. ಅದರಲ್ಲೂ "ದೇವರಿಲ್ಲ, ಶಾಸ್ತ್ರಗಳೆಲ್ಲಾ ಸುಳ್ಳು" ಎಂದು ಅಧಿಕ ಜನ ಹೇಳುತ್ತಿದ್ದ ಕಾಲದಲ್ಲಿ ಶ್ರೀಶಂಕರರು ಅವತರಿಸಿ, ಕೇವಲ ಸಕಾರಣವಾದ ತಮ್ಮ ವಾಗ್ಜಾಲದಿಂದ ಜನರನ್ನು ತಿದ್ದಿ ಮನುಷ್ಯರನ್ನಾಗಿ ಮಾಡಿದ್ದು ವಿಶೇಷ ಸಂಗತಿ. ಈ ಮಹನೀಯರ ಜೀವನದ ಕೆಲವು ಘಟನೆಗಳನ್ನು ಮಾತ್ರ ಇಲ್ಲಿ ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಕೇರಳ ಮಂಡಲದಲ್ಲಿ ಕಾಲಟಿಯೆಂಬ ಅಗ್ರಹಾರವಿದೆ ಹಿಂದೆ ರಾಜ ಶೇಖರನೆಂಬ ರಾಜನು ಕೇರಳ ದೇಶವನ್ನು ಪಾಲಿಸುತ್ತಿದ್ದನು. ಕಾಲಟಿ ಅಗ್ರಹಾರದಲ್ಲಿ 'ವಿದ್ಯಾಧಿರಾಜ'ನೆಂಬ ಬ್ರಾಹ್ಮಣಶ್ರೇಷ್ಠನಿಗೆ ಶಿವನನ್ನೇ ಗುರುವನ್ನಾಗಿ ವರಿಸಿದ ಶಿವಗುರುವೆಂಬ ಪುತ್ರನಿದ್ದನು. ತಂದೆಯ ಹೆಸರಿಗೆ ತಕ್ಕಂತೆ ಶಿವಗುರುವು ವಿದ್ಯಾವಿನಯ ಸಂಪನ್ನನೂ, ಸತ್ಕರ್ಮಗಳಲ್ಲಿ ಶ್ರದ್ಧೆಯುಳ್ಳವನೂ ಆಗಿ, ಗೃಹಸ್ಥಾಶ್ರಮ ಧರ್ಮವನ್ನು ಲೋಪವಿಲ್ಲದೆ ನಡೆಸುತ್ತಿದ್ದನು. ಈತನ ಪತ್ನಿ ಆರ್ಯಾಂಬೆಯೆಂಬ ಸತೀಮಣಿಯು ಪತಿಸೇವಾಪರಾಯಣಳೂ, ಗುಣವತಿಯೂ ಆಗಿದ್ದಳು. ಈ ದಂಪತಿಗಳಿಗೆ ಐಹಿಕ ಸುಖಕ್ಕೆ ಕಾರಣಗಳಾದ ಗೃಹಾರಾಮ ಧನಕನಕಾದಿಗಳಿಗೆ ಕೊರತೆಯಿರಲಿಲ್ಲ. ಸದ್ಗತಿಗೆ ಸಾಧನವಾದ ಸಂತತಿಯಿಲ್ಲದ ಕಾರಣ ಆ ದಂಪತಿಗಳು ಚಿಂತಾಕ್ರಾಂತರಾಗಿ ಸಂತತಿಯ ಕಾರಣ ಪರಮೇಶ್ವರನನ್ನು ಅನನ್ಯಭಕ್ತಿಯಿಂದ ಭಜಿಸುತ್ತಿದ್ದರು. ಇವರ ಆರಾಧನೆಯಿಂದ ತೃಪ್ತನಾದ ಈಶ್ವರನು ಒಂದು ದಿನ ಬ್ರಾಹ್ಮಣವೇಷದಿಂದ ಶಿವಗುರುವಿನ ಸ್ವಪ್ನದಲ್ಲಿ ಕಾಣಿಸಿಕೊಂಡು 'ನಿನಗೆ ಬೇಕಾದ ವರವನ್ನು ಬೇಡು' ಎಂದನು. ಅದಕ್ಕೆ ಆತನು ತನಗೆ ಶಂಕರನಿಗೆ ಸಮಾನನಾದ ಪುತ್ರನನ್ನು ಅನುಗ್ರಹಿಸಬೇಕೆಂದು ಬೇಡಿದನು. ಶ್ರೀಕಂಠನು 'ಹಾಗೆಯೇ ಆಗಲಿ' ಎಂದು ಹೇಳಿ ಅಂತರ್ಧಾನನಾದನು.

ಶಿವಗುರು – ಆರ್ಯಾಂಬೆ ದಂಪತಿಗಳಿಗೆ ಶ್ರೀಶಂಕರನ ಅನುಗ್ರಹದಿಂದ ಕ್ರಿ.ಶ. ೭೮೮ರಲ್ಲಿ ಪುತ್ರರತ್ನವೊಂದು ಜನಿಸಿತು. ಶಂಕರನ ಅನುಗ್ರಹದಿಂದ ಹುಟ್ಟಿದ ಮಗುವಿಗೆ ಅದೇ ಹೆಸರನ್ನಿಟ್ಟು ಶಿವಗುರುವು ಬ್ರಾಹ್ಮಣ ಸಂಪ್ರದಾಯದಂತೆ ಜಾತಕರ್ಮಾದಿ ಕರ್ಮಗಳನ್ನಾಚರಿಸಿದನು. ಲಾಕ್ಷಣಿಕರು ಮಗುವಿನ ಲಕ್ಷಣವನ್ನು ಪರೀಕ್ಷಿಸಿ, ಇವನು ಮಹಾಜ್ಞಾನಿಯಾಗಿ ಕೀರ್ತಿವಂತನಾಗುತ್ತಾನೆಂದು ತಿಳಿಸಿದರು. ಮಗುವು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿದ್ದನು. ಬಾಲಶಂಕರನು ಎರಡು ವರ್ಷಗಳೊಳಗಾಗಿ ಲಿಪಿಯನ್ನು ಪುರಾಣೇತಿಹಾಸಗಳನ್ನು ಪರಿಚಯ ಮಾಡಿಕೊಂಡು ಪಂಡಿತನಾದನು. ಮಹಾಮೇಧಾವಿಗಳಿಗೆ ಒಂದು ಬಾರಿ ಹೇಳಿಕೊಟ್ಟರೆ ಸಾಕು; ಅವರಿಗೆ ಹೃದ್ಗತವಾಗುತ್ತದೆ. ಶಿವಗುರುವು ಬಾಲಶಂಕರನಿಗೆ ಮೂರನೆಯ ವರ್ಷ ಪ್ರಾಪ್ತವಾಗಲು ವಿಧ್ಯುಕ್ತವಾಗಿ ಚೌಲ ಕರ್ಮವನ್ನು ಮಾಡಿ ವಿಧಿವಿಲಾಸದಂತೆ ಸ್ವರ್ಗಸ್ಥನಾದನು. ಆದರೆ ಅದೇ ವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡು ಶಂಕರನು ತಬ್ಬಲಿ

ಯಾದನು. ಪ್ರಹ್ಲಾದನೂ, ಧ್ರುವನೂ ಬಾಲ್ಯದಲ್ಲೇ ದಿವ್ಯಜ್ಞಾನವನ್ನು ಪಡೆದಂತೆ ಶಂಕರನೂ ಸಾಲ್ಕನೆಯ ವಯಸ್ಸಿನಲ್ಲೇ ಈಶ್ವರ ಕೃಪೆಯಿಂದ ಸರ್ವಜ್ಞತ್ವವನ್ನು ಪಡೆದನು. ಆರ್ಯಾಂಬೆಯು ಶಂಕರನ ಐದನೆಯ ವಯಸ್ಸಿನಲ್ಲಿ ಉಪನಯನ ಮಾಡಿಸಿದಳು. ಶಂಕರನು ನಿತ್ಯ ಭಿಕ್ಷಾನ್ನಮಾಡಿ ಜೀವಿಸುತ್ತಿದ್ದನು. ಒಂದು ದಿನ ಬಾಲಶಂಕರನು ಒಬ್ಬ ಬಡಬ್ರಾಹ್ಮಣನ ಮನೆಗೆ ಭಿಕ್ಷೆಗಾಗಿ ಹೋಗಿದ್ದಾಗ ಆ ಮನೆಯಲ್ಲಿ ಒಂದು ನೆಲ್ಲೀಕಾಯಿ ಹೊರತು ಮತ್ತೇನೂ ಇರಲಿಲ್ಲ. ಆ ಗೃಹಿಣಿಯು ಬಾಲಬ್ರಹ್ಮಚಾರಿಯ ತೇಜಸ್ಸಿಗೆ ಮುಗ್ಧಳಾಗಿ ಶಂಕರರ ಹತ್ತಿರ ಸರಿದು "ಎಲೈ ಶ್ರೇಷ್ಠ ಬ್ರಹ್ಮಚಾರಿಯೇ ಈ ದಿನ ನಿನಗೆ ಭಿಕ್ಷೆಯನ್ನಿತ್ತು ನಾನು ಧನ್ಯಳಾಗಲು ಕೇಳಿಕೊಂಡು ಬಂದಿಲ್ಲ. ಈ ಒಣನೆಲ್ಲೀಕಾಯಿ ವಿನಹ ಮತ್ತೇನೂ ನನ್ನ ಮನೆಯಲ್ಲಿಲ್ಲ. ಇದನ್ನೇ ಸ್ವೀಕರಿಸಬೇಕು" ಎಂದು ದೈನ್ಯದಿಂದ ಕೊಡಲು, ಶಂಕರರು ಸಂತೋಷದಿಂದ ಅದನ್ನು ಸ್ವೀಕರಿಸಿ, ಮಹಾಲಕ್ಷ್ಮಿಯನ್ನು ನೆನೆದು ಬಡಬ್ರಾಹ್ಮಣನ ಮನೆಯಲ್ಲಿ ಸುವರ್ಣ ನೆಲ್ಲೀಕಾಯಿಯ ಮಳೆಯನ್ನು ಸುರಿಸಬೇಕೆಂದು ಪ್ರಾರ್ಥಿಸಿದರು. ಧ್ರುವನ ಅನನ್ಯ ಭಕ್ತಿಗೆ ವಿಷ್ಣುವು ಪ್ರತ್ಯಕ್ಷವಾದಂತೆ, ಶಂಕರರ ತಿಳಿಯಾದ ಭಕ್ತಿಗೆ ಮಹಾಲಕ್ಷ್ಮಿಯು ಪ್ರತ್ಯಕ್ಷಳಾಗಿ, ಅವನ ಇಂಗಿತದಂತೆ, ಆ ದರಿದ್ರಳ ಮನೆಯಲ್ಲಿ ಚಿನ್ನದ ನೆಲ್ಲೀಕಾಯಿಯ ಮಳೆಯನ್ನೇ ಸುರಿಸಿದಳು. ಬಾಲ ಶಂಕರರ ಅನುಗ್ರಹದಿಂದ ಆ ಬಡಕುಟುಂಬವು ಮಹಾಭಾಗ್ಯದಿಂದ ವಿಕಾಸ ಹೊಂದಿತು.

ಆರನೆಯ ವರ್ಷಕ್ಕೆ ಕಾಲಿಟ್ಟ ಶಂಕರರು ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತರಾಗಿಯೂ ಸ್ವತಃ ಪಾಠ ಹೇಳುವ ಸಾಮರ್ಥ್ಯವನ್ನೂ ಪಡೆದರು. ಶಂಕರರು ಮುಂದೆ ಗುರುಕುಲವಾಸ ಮಾಡಿ ಉಪನಿಷತ್ತೇ ಮೊದಲಾದ ರಹಸ್ಯಗಳನ್ನು ತಿಳಿದರು. ಗುರುಕುಲದಲ್ಲಿ ಸಕಲ ವಿದ್ಯೆಯನ್ನೂ ಅಭ್ಯಸಿಸಿ, ಅವರ ಅಪ್ಪಣೆ ಪಡೆದು ತಮ್ಮ ವಿದ್ಯಾಪ್ರೌಢಿಮೆಯಿಂದ ಎಲ್ಲ ಜನರ ಮನಸ್ಸನ್ನೂ ಆಕರ್ಷಿಸುತ್ತ ಮನೆಗೆ ಬಂದರು. ತಾಯಿಗಿಂತ ಪ್ರತ್ಯಕ್ಷದೇವತೆ ಮತ್ತೊಂದಿಲ್ಲ. ಎಂಬುವುದನ್ನೂ ಲೋಕಕ್ಕೆ ತೋರಿಸಿಕೊಡಲು ತಾಯಿಯ ಸೇವೆಯಲ್ಲಿ ನಿರತರಾದರು. ತಾಯಿಯು ಪ್ರತಿನಿತ್ಯವೂ ಅಗ್ರಹಾರಕ್ಕೆ ದೂರದಲ್ಲಿದ್ದ ಪೂರ್ಣಾ ನದಿಗೆ ಸ್ನಾನಕ್ಕಾಗಿ ಹೋಗುತ್ತಿದ್ದರು. ಒಂದು ದಿನ ಮಧ್ಯಾಹ್ನದ ಬಿಸಿಲು ಬೇಗೆಯನ್ನು ತಾಳಲಾರದೆ ನದಿಯಿಂದ ಬರುತ್ತಾ ಆಕೆಯು ಮೂರ್ಛಿತ

ಳಾದಳು. ಶಂಕರರು ಒಡನೆಯೇ ತಾಯಿಯಿದ್ದ ಸ್ಥಳಕ್ಕೆ ಓಡಿಹೋಗಿ ತಾಯಿಗೆ ಗಾಳಿ ಹಾಕಿ ಉಪಚರಿಸಿ, ಪಾತ್ರೆಗಳನ್ನು ತಾವೇ ಹೊತ್ತುಕೊಂಡು, ತಾಯಿಯನ್ನು ಮನೆಗೆ ಕರೆದುಕೊಂಡು ಬಂದರು. ವೃದ್ಧಳಾದ ತಾಯಿ ದೂರದಲ್ಲಿರುವ ನದಿಗೆ ನಿತ್ಯವೂ ಹೋಗಿ ಬರಲಾರಳು, ಆ ನದಿಯೇ ಮನೆಯ ಸಮೀಪದಲ್ಲಿ ಪ್ರವಹಿಸುವಂತೆ ಮಾಡಬೇಕೆಂದು ಸಂಕಲ್ಪಿಸಿ ಬಾಲ ಶಂಕರರು "ಎಲೈ, ಪೂರ್ಣಾನದಿಯೆ, ನನ್ನ ವೃದ್ಧ ತಾಯಿಯನ್ನು ರಕ್ಷಿಸುವುದಕ್ಕಾಗಿ ನೀನು ನಮ್ಮ ಮನೆಯ ಸಮೀಪದಲ್ಲೇ ಹರಿದು ಹೋಗಬೇಕು" ಎಂದು ನದಿಯನ್ನು ಭಕ್ತಿಯಿಂದ ಬೇಡಿದರು. ಮಾರನೇ ದಿನ ಸೂರ್ಯೋದಯದ ವೇಳೆಗೆ ಶಂಕರರ ಪ್ರಾರ್ಥನೆಯಂತೆ ಪೂರ್ಣಾ ನದಿಯು ಅವರ ಮನೆಯ ಹಿಂಭಾಗದಲ್ಲಿ ಹರಿಯ ತೊಡಗಿದಳು. ಶಂಕರರ ಈ ಅಮಾನುಷ ಸಾಹಸ ವನ್ನು ಕಂಡು ಅಗ್ರಹಾರದ ಜನರು ಅವರನ್ನು ಬಹಳವಾಗಿ ಗೌರವಿಸತೊಡಗಿ ದರು. ಕೇರಳ ದೇಶದ ರಾಜನಾದ ರಾಜಶೇಖರನು ಶಂಕರರ ದರ್ಶನಾರ್ಥ ವಾಗಿ ಇವರ ಬಳಿ ಬಂದು ಅನೇಕ ಮರ್ಯಾದೆಗಳನ್ನು ಮಾಡಿ ಸತ್ಕರಿಸಿ ಅವರ ಆಶೀರ್ವಾದ ಪಡೆದು ಹೋದನು.

ಒಂದು ದಿನ ಗೌತಮ ಅಗಸ್ತ್ಯ ಮುಂತಾದ ಮಹರ್ಷಿಗಳು ಶಂಕರರ ದರ್ಶನಾರ್ಥವಾಗಿ ಬಂದರು. ಶಂಕರರ ತಾಯಿಯು ಅವರನ್ನು ಸತ್ಕರಿಸಿ ತನ್ನ ಮಗನಿಗೆ ಆಯುಸ್ಸೆಷ್ಟೆಂದು ಅವರಲ್ಲಿ ಪ್ರಶ್ನಿಸಿದಳು. ಆಗ ಅಗಸ್ತ್ಯರು "ನಿನ್ನ ಮಗನಿಗೆ ಆಯುಸ್ಸು ೩೨ ವರ್ಷ ಮಾತ್ರ ಎಂದು ಹೇಳಿ ಶಂಕರರ ದರ್ಶನ ಪಡೆದು ಹೊರಟು ಹೋದರು. ಮಗನ ಅಲ್ಪಾಯುಸ್ಸಿಗಾಗಿ ದುಃಖಿತ ಳಾದ ತಾಯಿಯನ್ನು ನೋಡಿ ಶಂಕರರು ಸಮಾಧಾನಪಡಿಸಿ, ಸಂಸಾರ ನಿಸ್ಸಾರ ವಾದುದು. ಆದುದರಿಂದ ಬಂಧನದಲ್ಲಿ ಬೀಳದಿರಲು, ಮುಂದಕ್ಕೆ ತನಗೆ ಸನ್ಯಾಸಾಶ್ರಮವೇ ಕ್ಷೇಮದಾಯಕವೆಂದು ಭಾವಿಸಿ ತಾಯಿಯ ಅನುಮತಿ ಯನ್ನು ಬೇಡಿದರು. ಶಂಕರರ ಅಭಿಪ್ರಾಯಕ್ಕೆ ತಾಯಿಯು ಸಂಪೂರ್ಣ ವಿರೋಧವನ್ನು ಸೂಚಿಸಿದುದರಿಂದ, ತಾಯಿಯ ಮಾತನ್ನು ಮೀರಲಾರದೆ ಸಂನ್ಯಾಸ ಸ್ವೀಕಾರಕ್ಕೆ ಶಂಕರರು ಉಪಾಯವನ್ನು ಹುಡುಕುತ್ತಲೇ ಇದ್ದರು. ಒಂದು ದಿನ ಮನೆಯ ಹಿಂಬದಿಯಲ್ಲಿ ಹರಿಯುತ್ತಿದ್ದ ಪೂರ್ಣಾನದಿಗೆ ಶಂಕರರು ಸ್ನಾನಕ್ಕಾಗಿ ಹೋಗಿ ನೀರಿನಲ್ಲಿ ಇಳಿದರು. ಹಠಾತ್ ಒಂದು ಮೊಸಳೆಯು ಬಂದು ಶಂಕರರ ಕಾಲನ್ನು ಹಿಡಿದುಕೊಂಡಿತು. ಕೂಡಲೇ ಅವರು ಭಯ

ಪಟ್ಟವರಂತೆ ಆರ್ತನಾದ ಮಾಡುತ್ತಾ, "ಭಯಂಕರವಾದ ಮೊಸಳೆ ನನ್ನನ್ನು ನುಂಗಲಿದೆ; ಬೇಗ ಬಾ!" ಎಂದು ತಾಯಿಯನ್ನು ಕೂಗಿದರು. ಮಗನ ಆರ್ತನಾದ ಕೇಳಿ ತಾಯಿ ಅಲ್ಲಿಗೆ ಓಡಿಬಂದು, "ಅಯ್ಯೋ ದೈವವೆ! ಮಗನ ಮುಖವನ್ನು ನೋಡಿ ಪತಿವಿರಹ ದುಃಖವನ್ನು ಮರೆತಿದ್ದ ನನಗೆ ಪುತ್ರನ ಮರಣವನ್ನು ನೋಡುವ ದುಃಖವು ಒದಗಿತೆ? ಶಂಕರಾ; ಕಾಪಾಡು! ಕಾಪಾಡು!!" ಎಂದು ಮೊರೆಯಿಟ್ಟಳು. ಅಳುತ್ತಿದ್ದ ತಾಯಿಯನ್ನು ನೋಡಿ ಶಂಕರರು "ಈಗಲಾದರೂ ನನಗೆ ಸನ್ಯಾಸ ಸ್ವೀಕಾರಕ್ಕೆ ಅಪ್ಪಣೆ ಕೊಡು; ಆಶ್ರಮ ಭೇದದಿಂದ ಜನ್ಮಭೇದವಾಗಿ ಈ ಮೊಸಳೆಯಿಂದ ಬದುಕಿಕೊಳ್ಳು ವೆನು" ಎಂದರು ಆರ್ಯಾಂಬೆಯು ಈ ಮಾತನ್ನು ಕೇಳಿ ತನ್ನ ಮಗನು ಬದುಕಿದರೆ ಸಾಕು, ಅವನ ಮುಖವನ್ನಾದರೂ ನೋಡುತ್ತಿರಬಹುದು. ಮೃತನಾದರೆ ಆ ಭಾಗ್ಯವೂ ಇಲ್ಲದಂತಾಗುವುದೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಅವನಿಗೆ ಯತ್ಯಾಶ್ರಮ ಪರಿಗ್ರಹಿಸಲು ಅನುಮತಿ ಕೊಟ್ಟಳು. ಮೊಸಳೆಯ ನಿರ್ಬಂಧದಿಂದ ಮುಕ್ತರಾದ ಶಂಕರರು ನೀರಿನಿಂದ ಮೇಲಕ್ಕೆದ್ದು ಬಂದು ತಾಯಿಯ ಸಮೀಪದಲ್ಲಿ ನಿಂತರು. ಪುತ್ರ ವಿರಹವನ್ನು ಸಹಿಸದ ತಾಯಿಯ ಕಣ್ಣಲ್ಲಿ ಧಾರಾಕಾರವಾಗಿ ನೀರು ಹರಿಯತೊಡಗಿತು. ಶಂಕರರು ತಾಯಿ ಯನ್ನು ಸಮಾಧಾನ ಪಡಿಸಿ, "ನೀನು ಸ್ಮರಿಸಿಕೊಂಡಾಗಲೆಲ್ಲಾ ನಾನು ನಿನ್ನಲ್ಲಿಗೆ ಬರುವೆನು. ಧೈರ್ಯದಿಂದಿರು. ನಿನ್ನ ಪತಿಯು ಸಂಪಾದಿಸಿರುವ ಐಶ್ವರ್ಯವನ್ನನುಭವಿಸುತ್ತಿರುವ ಬಂಧುಗಳು ನಿನಗೆ ರಕ್ಷಣೆ ಕೊಡುವರು" ಎಂದು ಹೇಳಿ ಬಂಧುಗಳನ್ನು ಕರೆದು ಮಾತೃ ರಕ್ಷಣಾ ಭಾರವನ್ನು ಅವರಿಗೆ ವಹಿಸಿ, ಕಾಲಟಿ ಅಗ್ರಹಾರದಿಂದ ಹೊರ ಹೊರಟರು. ಗುರುಗಳನ್ನರಸುತ್ತಾ ನರ್ಮದಾ ತೀರದಲ್ಲಿದ್ದ ಗೋವಿಂದ ಯತಿಗಳ ಆಶ್ರಮಕ್ಕೆ ಬಂದು ಅವರಿಗೆ ವಂದಿಸಿ, ತಮ್ಮನ್ನೂ ಶಿಷ್ಯನನ್ನಾಗಿ ಪರಿಗ್ರಹಿಸಬೇಕೆಂದು ಅವರಲ್ಲಿ ಬೇಡಿದರು. ಗೋವಿಂದ ಯತಿಗಳು ಬಾಲ ಶಂಕರರನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ಅದ್ವೈತ ತತ್ವವನ್ನು ಉಪದೇಶಿಸಿದರು. ಉಪದೇಶ ಮಾಡಿದ ಮೇಲೆ ಪ್ರಿಯಶಿಷ್ಯನ ಮೈದಡವಿ, "ಶಂಕರಾ! ಇನ್ನು ಮುಂದೆ ನಿನ್ನಿಂದ ಮಹತ್ಕಾರ್ಯಗಳು ನಡೆಯ ಬೇಕಾಗಿದೆ. ನೀನು ಈಗಲೇ ಪವಿತ್ರ ಕ್ಷೇತ್ರವೆನಿಸಿದ ಕಾಶೀಪಟ್ಟಣಕ್ಕೆ ಪ್ರಯಾಣಮಾಡಿ, ವಿಶ್ವೇಶ್ವರನ ದರ್ಶನ ಪಡೆದು, ವ್ಯಾಸರಚಿತವಾದ ಬ್ರಹ್ಮ ಸೂತ್ರಕ್ಕೆ ಭಾಷ್ಯವನ್ನು ಬರೆದು, ವ್ಯಾಸರಂತೆ ಕೀರ್ತಿವಂತನಾಗು" ಎಂದು

ಹೊರಸಿದರು. ಶಂಕರರು ಗುರುಗಳ ಆಜ್ಞೆಯಂತೆ ಕಾಶೀಕ್ಷೇತ್ರಕ್ಕೆ ಪ್ರಯಾಣ ಮಾಡಿದರು. ವಿಶ್ವೇಶ್ವರನ ದರ್ಶನ ಪಡೆದು ಅವರು ಅಲ್ಲಿ ಸಜ್ಜನ ಸಮೂಹಕ್ಕೆ ಹಿತೋಪದೇಶ ಮಾಡುತ್ತಾ ಕಾಲಕಳೆಯುತ್ತಿದ್ದರು. ಒಂದು ದಿನ ಶಂಕರ ಯತಿಗಳು ಗಂಗೆಯಲ್ಲಿ ಮಿಂದು ಯತಿ ಧರ್ಮವನ್ನಾಚರಿಸುತ್ತ ನದೀತೀರ ದಲ್ಲಿರಲು ಚೋಳದೇಶದಿಂದ ಬಂದ 'ಸನಂದನ'ನೆಂಬುವನು ಶಂಕರರಿಗೆ ನಮಸ್ಕರಿಸಿ ಅವರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಅವರ ಪ್ರಿಯಶಿಷ್ಯ ನಾದನು. ಈ ಸನಂದನನೇ ಮುಂದೆ ಪದ್ಮಪಾದನೆಂಬ ಹೆಸರಿನಿಂದ ಪ್ರಸಿದ್ಧಿ ಪಡೆಯುವನು. ಗುರುಗಳಾದ ಗೋವಿಂದ ಯತಿಗಳ ಆಜ್ಞೆಯಂತೆ ಶಂಕರರು ಭಾಷ್ಯ ಬರೆಯಲು ನಿತ್ಯವೂ ಚಿಂತಿಸುತ್ತಿದ್ದರು. ವ್ಯಾಸರಚಿತವಾದ ಬ್ರಹ್ಮ ಸೂತ್ರಕ್ಕೆ ಭಾಷ್ಯ ಬರೆಯಲು ವ್ಯಾಸಮುನಿಯ ಆಶ್ರಮವಾದ ಬದರಿಕಾಶ್ರಮವೇ ಯೋಗ್ಯವಾದ ಸ್ಥಳವೆಂದು ಚಿಂತಿಸಿ, ಶಂಕರರು ಶಿಷ್ಯಸಮೇತರಾಗಿ ಕಾಶಿಯಿಂದ ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು. ಸುಮುಹೂರ್ತದಲ್ಲಿ ವೇದವ್ಯಾಸ ರನ್ನು ಧ್ಯಾನಿಸಿ ಅವರು ಸೂತ್ರ ಭಾಷ್ಯವನ್ನು ರಚಿಸಿ ಪದ್ಮಪಾದಾದಿ ಶಿಷ್ಯರಿಗೆ ಬೋಧಿಸಿದರು. ಆ ಸಮಯದಲ್ಲಿ ಪರಾಶರ ಪುತ್ರರಾದ ವೇದವ್ಯಾಸರು ಸ್ವರಚಿತವಾದ ಸೂತ್ರಕ್ಕೆ ಭಾಷ್ಯಬರೆದ ಶಂಕರ ಯತಿಗಳಿಗೆ ಪ್ರತ್ಯಕ್ಷರಾಗಿ, ಅವರಿಗೆ ಸಕಲ ಶ್ರೇಯಸ್ಸನ್ನೂ ಕೋರಿ ಅಂತರ್ಧಾನರಾದರು.

ಶಂಕರಯತಿಗಳು ಭಾಷ್ಯಪ್ರಚಾರಕ್ಕಾಗಿ ದೇಶಸಂಚಾರ ಕೈಗೊಂಡರು. ಬದರಿಕಾಶ್ರಮದಿಂದ ಹೊರಟು ಪಂಡಿತೋತ್ತಮರಾದ ಭಟ್ಟಪಾದರನ್ನು ಕಾಣಲು ಪ್ರಯಾಗಕ್ಕೆ ಬಂದರು. ಅಲ್ಲಿ ಭಟ್ಟಪಾದರನ್ನು ಕಂಡು, "ಮಹಾ ಮೇಧಾವಿಗಳಾದ ಮಂಡನ ಮಿಶ್ರರನ್ನು ನೀವು ವಾದದಲ್ಲಿ ಜಯಿಸಿದರೆ ಸರ್ವ ರನ್ನೂ ಜಯಿಸಿದಂತೆಯೇ" ಎಂದು ಭಟ್ಟಪಾದರು ಹೇಳಲು, ಅವರ ಮಾತಿನಂತೆ ಮಂಡನಮಿಶ್ರರನ್ನು ಕಾಣಲು ಪ್ರಯಾಗದಿಂದ ಮಾಹಿಷ್ಮತೀ ನಗರಕ್ಕೆ ಬಂದರು. ಕಾಶೀಪ್ರಾಂತದ ಮಾಹಿಷ್ಮತೀ ನಗರದಲ್ಲಿ ಮಂಡನ ಮಿಶ್ರರಿಗೆ ವಿದ್ಯಾವಂತಳಾದ ಶಾರದಾದೇವಿಯು ಮಡದಿಯಾಗಿದ್ದಳು. ಈ ಶಾರದಾದೇವಿಯು ಸರಸ್ವತಿಯ ಅವತಾರವೆಂದೂ, ಮಂಡನಮಿಶ್ರರು ಬ್ರಹ್ಮನ ಅವತಾರವೆಂದೂ ಸಂಪ್ರದಾಯವು ಹೇಳುತ್ತದೆ. ಶಂಕರರು ಇವ ರೊಡನೆ ವಾಗ್ವಾದ ನಡಸಬೇಕಾಗಿತ್ತು. ಶಂಕರ ಮತ್ತು ಮಂದನಮಿಶ್ರರ ಚರ್ಚೆಯಲ್ಲಿ ಶಾರದಾದೇವಿ ಮಧ್ಯಸ್ಥಿಕೆ ವಹಿಸಿದಳು. ಮಂಡನಮಿಶ್ರರು

ವಾದದಲ್ಲಿ ಸೋತರೆ ಯತ್ಯಾಶ್ರಮವನ್ನು ಸ್ವೀಕರಿಸುವೆನೆಂದು ಶಪಥಮಾಡಿದರು. ವಾದದಲ್ಲಿ ಮಂಡನಮಿಶ್ರರಿಗೆ ಸೋಲಾಯಿತು. ಶಾರದೆಯು ಪತಿಯು ಪ್ರತಿಜ್ಞೆಮಾಡಿದಂತೆ ಯತ್ಯಾಶ್ರಮವನ್ನು ಸ್ವೀಕರಿಸಲು ಅನುಮತಿಯಿತ್ತಳು. ಅನಂತರ ಶಾರದೆಯೇ ಶಂಕರರೊಡನೆ ವಾದಕ್ಕೆ ನಿಂತಳು. ಶಾರದೆಯನ್ನು ವಾದದಲ್ಲಿ ಪರಾಭವಗೊಳಿಸಲು ಶಂಕರರಿಗೆ ಹದಿನೇಳು ದಿನಗಳು ಹಿಡಿಯಿತು.

ವಿಜಯವನ್ನು ಪಡೆದ ಶಂಕರರು ತೀರ್ಥಯಾತ್ರಾ ಪ್ರಸಂಗದಿಂದ ಗೋಕರ್ಣಕ್ಕೆ ಹೋದರು. ಅಲ್ಲಿ ಈಶ್ವರ ದರ್ಶನ ಪಡೆದು ಹರಿಹರದ ಮಾರ್ಗವಾಗಿ ಮೂಕಾಂಬಿಕಾ ಕ್ಷೇತ್ರಕ್ಕೆ ಬಂದರು. ಅಲ್ಲಿ ಮೂಕಾಂಬಿಕೆಯನ್ನು ಸ್ತೋತ್ರಮಾಡಿ ಶ್ರೀಬಲಿಯೆಂಬ ಅಗ್ರಹಾರಕ್ಕೆ ಬಂದರು. ಅಲ್ಲಿ ಪ್ರಭಾಕರನೆಂಬ ದೊಡ್ಡ ವಿದ್ವಾಂಸರೊಬ್ಬರಿದ್ದರು ಅವರ ಪ್ರಾರ್ಥನೆಯಂತೆ ಅವರ ಮಗನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದರು. ಇವರೇ ಹಸ್ತಾಮಲಕರೆಂಬ ಹೆಸರನ್ನು ಪಡೆದು ಶಂಕರರ ಪ್ರಿಯಶಿಷ್ಯರಲ್ಲೊಬ್ಬರಾದರು. ಶ್ರೀಬಲಿಯಿಂದ ಹೊರಟು ತುಂಗಾನದೀ ದಡದಲ್ಲಿರುವ ಶೃಂಗೇರಿಗೆ ಬಂದರು. ಅಲ್ಲಿ ಮಾನವರ ಶ್ರೇಯಸ್ಸಿಗಾಗಿ ಶಾರದಾದೇವಿಯನ್ನು ಪ್ರತಿಷ್ಠೆಮಾಡಿ, ದೇವಿಗೆ ಆಲಯವೊಂದನ್ನು ಕಟ್ಟಿಸಿ, ಭಾರತೀ ಪೀಠವನ್ನು ಸ್ಥಾಪಿಸಿದರು. ಶಂಕರರು ಶೃಂಗೇರಿಯಲ್ಲಿ ಶಿಷ್ಯರಿಗೆ ಉಪದೇಶ ಮಾಡುತ್ತಾ ಹನ್ನೆರಡು ವರ್ಷಗಳಕಾಲ ವಾಸವಾಗಿದ್ದರು. ತೋಟಕಾಚಾರ್ಯರೆಂಬ ಪ್ರಿಯಶಿಷ್ಯರು ಶಂಕರರಿಗೆ ದೊರೆತಿದ್ದು ಇಲ್ಲಿಯೇ. ಶೃಂಗೇರಿಯ ಪೀಠಕ್ಕೆ ಸುರೇಶ್ವರಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿ ಶಂಕರರು ಕೆಲವುಕಾಲ ಅಲ್ಲಿಯೇ ನಿಂತರು.

ಈ ಮಧ್ಯೆ ತಾಯಿಗೆ ಅವಸಾನ ಕಾಲವು ಪ್ರಾಪ್ತವಾಗಿದೆಯೆಂಬ ವರ್ತಮಾನವನ್ನು ತಿಳಿದು ಶಂಕರರು ತಾಯಿಯ ಕಡೆಯ ದರ್ಶನಲಾಭಕ್ಕಾಗಿ ಕಾಲಟಿಗೆ ಬಂದರು. ಮರಣೋನ್ಮುಖಳಾಗಿದ್ದ ಆರ್ಯಾಂಬೆಯು ಶಾಂತಸ್ವರೂಪನಾದ ಮಗನನ್ನು ಕಣ್ಣುತುಂಬ ನೋಡಿ ಆನಂದಿಸಿದಳು. ಈ ಶರೀರಕ್ಕೆ ಮಗನೇ ಸಂಸ್ಕಾರಮಾಡಬೇಕೆಂದು ವಾಗ್ದಾನ ತೆಗೆದುಕೊಂಡು, ಆರ್ಯಾಂಬೆಯು ಮಗನ ಸಮಕ್ಷಮದಲ್ಲೇ ಜೀರ್ಣವಾದ ಶರೀರವನ್ನು ತ್ಯಜಿಸಿದಳು. ವಾಗ್ದಾನದಂತೆ ಶಂಕರರು ತಾಯಿಗೆ ವಿಧಿಪೂರ್ವಕವಾಗಿ ಸಂಸ್ಕಾರ ಮಾಡಿದರು.

ಈ ವೇಳೆಗೆ ಶೃಂಗೇರಿಯಲ್ಲಿದ್ದ ಶಂಕರರ ಶಿಷ್ಯರೆಲ್ಲರೂ ಕಾಲಟಿಗೆ ಬಂದು ಸೇರಿದರು. ಶಿಷ್ಯರೊಡಗೂಡಿದ ಶಂಕರರು ಪುನಃ ದೇಶಸಂಚಾರವನ್ನು ಮುಂದುವರೆಸಿದರು. ಸಹಸ್ರಾರು ಮಂದಿ ಶಿಷ್ಯರೊಡನೆ ಅವರು ಕೇರಳದಿಂದ ಹೊರಟು ರಾಮಸೇತುವಿಗೆ ಬಂದರು. ಸೇತುದರ್ಶನದಿಂದ ಸಂತುಷ್ಟರಾಗಿ ಕಾಂಚೀ ಪಟ್ಟಣಕ್ಕೆ ಹಿಂತಿರುಗಿದರು. ಅಲ್ಲಿ ಶಾಕ್ತೇಯರೆಂಬ ಜನರು ಮದ್ಯ ಪಾನಾದಿಗಳಲ್ಲಿ ನಿರತರಾಗಿ ದುರ್ಮಾರ್ಗಿಗಳಾಗಿದ್ದರು. ತಮ್ಮ ಚಾತುರ್ಯದಿಂದ ಆ ಜನರನ್ನು ತಿದ್ದಿ ಸನ್ಮಾರ್ಗಿಗಳನ್ನಾಗಿ ಪರಿವರ್ತನೆಗೊಳಿಸಿದರು. ಅಲ್ಲಿಂದ ಆಂಧ್ರ ದೇಶದಲ್ಲಿ ಪ್ರಜೆಗಳಿಗೆ ಹಿತೋಪದೇಶಮಾಡಿ, ತಿರುಪತಿಯನ್ನು ಹೊಕ್ಕು ವೆಂಕಟಾಚಲಪತಿಯನ್ನು ಸೇವಿಸಿ ವಿದರ್ಭದೇಶಕ್ಕೆ ಬಂದರು. ಅಲ್ಲಿ ತಮ್ಮ ಅಮೃತವಾಣಿಯಿಂದ ಜನರನ್ನು ಆಕರ್ಷಣೆ ಮಾಡುತ್ತಾ, ಕರ್ಣಾಟ ಮಂಡಲಕ್ಕೆ ಬಂದರು. ಕನ್ನಡ ನಾಡಿನಲ್ಲಿ ಕಾಪಾಲಿಕರನ್ನು ಸನ್ಮಾರ್ಗಕ್ಕೆ ತಿರುಗಿಸಿ, ಪಶ್ಚಿಮ ಸಮುದ್ರ ಸಮೀಪದಲ್ಲಿರುವ ಗೋಕರ್ಣ ಕ್ಷೇತ್ರಕ್ಕೆ ಬಂದರು. ಅಲ್ಲಿ ಕೆಲವರನ್ನು ಶಿಷ್ಯರನ್ನಾಗಿ ಪರಿಗ್ರಹಿಸಿ ಸೌರಾಷ್ಟ್ರದಲ್ಲಿ ಸಂಚರಿಸುತ್ತಾ ಶ್ರೀಕೃಷ್ಣಪರಮಾತ್ಮನಿಂದ ಅಲಂಕೃತವಾದ ದ್ವಾರಕಾಪಟ್ಟಣಕ್ಕೆ ಬಂದರು. ಶ್ರೀಕೃಷ್ಣನ ದರ್ಶನಪಡೆದು ಶಂಕರರು ಉಜ್ಜಯಿನೀ ನಗರಕ್ಕೆ ಬಂದರು. ಅಲ್ಲಿ ಭಟ್ಟಭಾಸ್ಕರರು ಅವರಿಗೆ ವಿಧೇಯರಾಗಿ ನಡೆದುಕೊಂಡರು. ಅಲ್ಲಿಂದ ಪ್ರಯಾಣ ಮಾಡಿ ಅವಂತಿ ದೇಶದಲ್ಲಿ ಸಂಚರಿಸುತ್ತಾ, ಬಾಣ, ಮಯೂರ, ದಂಡಿಯೇ ಮೊದಲಾದ ಕವಿಪುಂಗವರನ್ನು ಮಾತನಾಡಿಸಿ, ಪಾಂಚಾಲ ದೇಶಕ್ಕೆ ಬಂದರು. ಅಲ್ಲಿದ್ದ ಶ್ರೀಹರ್ಷ ಕವಿಯನ್ನು ತಮಗೆ ವಿಧೇಯನನ್ನಾಗಿ ಮಾಡಿಕೊಂಡು, ಉತ್ತರ ದೇಶಗಳಲ್ಲಿ ಸಂಚರಿಸುತ್ತಾ, ಶಾರದಾ ಪೀಠ ವನ್ನೇರಲು ಕಾಶ್ಮೀರಕ್ಕೆ ಬಂದರು. ಆವರೆವಿಗೆ ದಕ್ಷಿಣದೇಶದ ಯಾವ ವಿದ್ವಾಂಸರೂ ಆ ಸರ್ವಜ್ಞ ಪೀಠವನ್ನು ಹತ್ತಿರಲಿಲ್ಲ. ಶಾರದಾಪೀಠದಲ್ಲಿದ್ದ ವಿದ್ವಾಂಸರು ಶಂಕರರೊಡನೆ ವಾಗ್ವಾದ ಮಾಡಿ ಶಂಕರರ ವಿದ್ಯಾಪ್ರೌಢಿ ಮೆಗೂ,ನಿರರ್ಗಳವಾಗಿ ತತ್ವ ನಿರೂಪಣೆ ಮಾಡುವ ಮಾತಿನ ಸರಣಿಗೂ, ಮನಸೋತು ಅವರನ್ನು ಸರ್ವಜ್ಞಪೀಠದಲ್ಲಿ ಕುಳ್ಳಿರಿಸಿ ಗೌರವಿಸಿದರು.

ಹೀಗೆ ಸಮಗ್ರ ಭಾರತದಲ್ಲಿ ಸಂಚರಿಸಿದ ಶಂಕರಯತಿಗಳು ಉದ್ದೇಶಿಸಿದ ಕಾರ್ಯಗಳು ಇಲ್ಲಿಗೆ ಮುಕ್ತಾಯವಾಯಿತು" ಮುಂದಕ್ಕೆ ಆಸ್ತಿಕ ಜನರ ರಕ್ಷಣೆ ಜಗದೀಶ್ವರನಿಗೆ ಸೇರಿದ್ದು " ಎಂದು ನಿಶ್ಚಯಿಸಿ ಕೇದಾರಕ್ಕೆ ಬಂದರು. ಅಲ್ಲಿಯ

ಛಳಿಯನ್ನು ತಡೆಯಲಾರದೆ ಕಷ್ಟಪಡುತ್ತಿರುವ ಶಿಷ್ಯಮಂಡಲಿಯನ್ನು ನೋಡಿ, ಅನನ್ಯಭಕ್ತಿಯಿಂದ ಶಂಕರನನ್ನು ಪ್ರಾರ್ಥಿಸಿ ಬಿಸಿನೀರನ್ನು ತರಿಸಿದರು. ಈಗಲೂ ಆ ಸ್ಥಳದಲ್ಲಿ "ತಪ್ತತೋಯನದಿ" ಎಂಬ ಹೆಸರಿನಿಂದ ಬಿಸಿನೀರು ಹರಿಯುತ್ತಿದೆ. ತಮ್ಮ ಅವಸಾನಕಾಲ ಪ್ರಾಪ್ತವಾಗಿರುವುದನ್ನು ತಿಳಿದ ಶಂಕರರು ತಮ್ಮ ಮುಖ್ಯ ಶಿಷ್ಯರನ್ನು ಕರೆದು "ಆಸ್ತಿಕಧರ್ಮ ನೀವು ಕಾಪಾಡಿದರೆ, ಜಗದೀಶ್ವರನು ನಿಮ್ಮನ್ನು ಕಾಪಾಡುವನು, ನಿಮಗೆ ಸಕಲ ಶ್ರೇಯಸ್ಸೂ ಉಂಟಾಗಲಿ" ಎಂದು ಹರಸುತ್ತಾ, ತಮ್ಮ ೩೨ನೆಯ ವಯಸ್ಸಿನಲ್ಲಿ ಈ ಲೋಕದಿಂದ ಕಣ್ಮರೆಯಾದರು.

ಶಂಕರರು ಅದ್ವೈತ ಸಿದ್ಧಾಂತವನ್ನು ಪುನರುಜ್ಜೀವಗೊಳಿಸಿದರು. ಇವರ ಅನುಯಾಯಿಗಳು ಶಾಂಕರರೆನಿಸುವರು. ಶಂಕರರ ತರುವಾಯ ಅವರು ಹಾಕಿದ ಧರ್ಮದ ವೃಕ್ಷವನ್ನು ಅವರ ಶಿಷ್ಯರು ಚೆನ್ನಾಗಿ ಬೆಳೆಸಿ ಅದು ಶಾಖೋಪಶಾಖೆಯಾಗಿ ಹರಡಿ ಫಲಿತವಾಗುವಂತೆ ಮಾಡಿದರು. ಶಂಕರರು ಉಪದೇಶಿಸಿದ ತತ್ವಸರಣಿಯನ್ನು ಅನೇಕರು ಅನುಸರಿಸಿದರು. ಅವರು ಶೃಂಗೇರಿ, ದ್ವಾರಕ, ಬದರಿಕಾಶ್ರಮ, ಜಗನ್ನಾಥ ಕ್ಷೇತ್ರಗಳಲ್ಲಿ ಮಠಗಳನ್ನು ಸ್ಥಾಪಿಸಿದ್ದರು. ಈ ನಾಲ್ಕು ಮಠಗಳಲ್ಲಿಯೂ ಕ್ರಮವಾಗಿ, ಸುರೇಶ್ವರರು, ಪದ್ಮಪಾದರು, ತ್ರೋಟಕಾಚಾರ್ಯರು, ಹಸ್ತಾಮಲಕರು ಎಂಬ ನಾಲ್ವರು ಪ್ರಿಯಶಿಷ್ಯರು ಶಂಕರರ ಆಜ್ಞೆಯಂತೆ ಅದ್ವೈತ ತತ್ವವನ್ನು ಪ್ರಚಾರ ಮಾಡಿದರು. ಈ ಮಠಗಳು ಈಗಲೂ ಮಂದಜ್ಞರಿಗೆ ಜ್ಞಾನದಾನ ಮಾಡುವುದರಲ್ಲಿಯೂ, ಧರ್ಮಕಾರ್ಯಗಳನ್ನು ನಡೆಸುವುದರಲ್ಲಿಯೂ ತೊಡಗಿವೆ. ಶಂಕರರು ದೊಡ್ಡ ಪಂಡಿತರು. ಸಾಧಾರಣ ಮಾನವನು ಅಕ್ಷರಾಭ್ಯಾಸ ಮಾಡುವ ಕಾಲಕ್ಕೆ ಶಂಕರರು ಗ್ರಂಥರಚನೆ ಮಾಡುವ ಸಾಮರ್ಥ್ಯವನ್ನು ಪಡೆದಿದ್ದರು. ಸಾಮಾನ್ಯ ಜನರಂತೆ ಇವರು ಅರ್ಥಕಾಮಪರರಾಗಿರಲಿಲ್ಲ. ಅರ್ಥಕಾಮರನ್ನು ನೋಡಿ ನೊಂದ ಶಂಕರರು ಅವರಿಗೆ "ಎಲೈ ಮೂರ್ಖ! ಅಧಿಕ ದ್ರವ್ಯಾರ್ಜನೆ ಮಾಡಬೇಕೆಂಬ ಆಶೆಯನ್ನು ಬಿಡು. ಅದಕ್ಕೆ ಬದಲಾಗಿ ಸದ್ಬುದ್ಧಿಯನ್ನು ಸಂಪಾದಿಸುವ ದಾರಿ ಹುಡುಕು. ಅಯಾಚಿತವಾಗಿ ದೇವರು ಕೊಟ್ಟ ದ್ರವ್ಯದಲ್ಲಿ ಮನಸ್ಸನ್ನು ಸಂತೋಷಪಡಿಸು" ಎಂಬುದಾಗಿ ಉಪದೇಶಿಸಿರುತ್ತಾರೆ. ಹೀಗೆಯೇ ಮಾನವನ ಕಲ್ಯಾಣಕ್ಕಾಗಿ ಹೇಳುವ "ಭಗವಂತನ ನಾಮಗಳನ್ನು ಧ್ಯಾನಿಸಬೇಕು, ಸತ್ಪುರುಷರ ಸಹವಾಸದಲ್ಲಿರಬೇಕು. ದೀನ

ದಲಿತರಲ್ಲಿ ದಾನಮಾಡಬೇಕು" ಮುಂತಾದ ಉಪದೇಶಬೋಧಕಗಳಾದ ಮಾತುಗಳು ರಮಣೀಯವಾಗಿವೆ. ಶಂಕರರು ವೈರಾಗ್ಯನಿಧಿಗಳು. ಅವರು ವಿವಾಹವನ್ನು ಮಾಡಿಕೊಳ್ಳಲೇ ಇಲ್ಲ. ಬ್ರಹ್ಮಚರ್ಯಾಶ್ರಮದಿಂದ ನೇರವಾಗಿ ಸನ್ಯಾಸಾಶ್ರಮಕ್ಕೆ ಹತ್ತಿದರು. ಭವಬಂಧನಕ್ಕೆ ಸಿಕ್ಕಿ ನರಳಲಿಲ್ಲ, ಸ್ವತಂತ್ರ ಮನೋವೃತ್ತಿಯಿಂದ ನಡೆದು ನೈಜವಾದ ಭಕ್ತಿಯಿಂದ ಭಗವಂತನನ್ನು ಸಾಕ್ಷಾತ್ಕರಿಸಿ, ತಾವು ಕಂಡದ್ದನ್ನು ಶಿಷ್ಯರಿಗೆ ಬೋಧಿಸಿ, ಸ್ವಸ್ಥಾನವನ್ನು ಸೇರಿದರು.

# ಶ್ರೀಮಧ್ವಾಚಾರ್ಯ

ತತ್ವಜ್ಞಾನಿಗಳ ಸಮುದಾಯದಲ್ಲಿ ಮಧ್ವಾಚಾರ್ಯರಿಗೂ ಒಂದು ವಿಶಿಷ್ಟವಾದ ಸ್ಥಾನವಿದೆ. ಶಂಕರರು ಹುಟ್ಟುವುದಕ್ಕೆ ಮುಂಚೆ ಭರತಖಂಡದಲ್ಲಿ ದೇವರಾಗಲೀ, ಪಾಪಪುಣ್ಯಗಳಾಗಲಿ, ಸ್ವರ್ಗನರಕಗಳಾಗಲಿ, ಯಾವುದೂ ಇಲ್ಲವೆಂತಲೇ ಅನೇಕ ಜನರು ವಾದಿಸುತ್ತಿದ್ದರು. ಆಗಿನ ಸಮಾಜಕ್ಕೆ ತಕ್ಕಂತೆ ಶಂಕರರು ಅವತರಿಸಿ, "ದೇವನೊಬ್ಬನಿದ್ದಾನೆ, ಜಗತ್ತು ಅವನ ಮಾಯೆಗೆ ಒಳಪಟ್ಟಿರುವುದರಿಂದ, ನಮ್ಮ ಕಣ್ಣಿಗೆ ಕಾಣುತ್ತಿರುವುದು ಮಾಯಾಪ್ರಪಂಚ, ನಿಜವಲ್ಲ. ಇವಕ್ಕಾಗಿ ನಾವು ಪರಸ್ಪರ ಬಡಿದಾಡಿ ಅಹಂಕಾರ ಪಡಬೇಕಾಗಿಲ್ಲ" ಎಂದು ಮುಂತಾದ ತತ್ವಗಳನ್ನು ಸಕಾರಣವಾಗಿ ಪ್ರತಿಪಾದಿಸಿ ಜನರನ್ನು ತಿದ್ದಿದರು. ಈ ರೀತಿಯಾದ ಹಿಂದೂ ಧರ್ಮದ ಸಂಸ್ಕೃತಿಯನ್ನು ಮಧ್ವಾಚಾರ್ಯರು ಮತ್ತಷ್ಟು ಪರಿಷ್ಕರಿಸಿ ಅಭಿವೃದ್ಧಿಪಡಿಸಿ ಭಾರತೀಯರ ಪ್ರೀತಿ ಗೌರವಗಳಿಗೆ ಪಾತ್ರರಾದರು. ಶಂಕರ–ರಾಮಾನುಜ–ಮಧ್ವಾಚಾರ್ಯ ಈ ಮೂವರೂ ವ್ಯಾಸ ಸೂಕ್ತಕ್ಕೆ ಭಾಷ್ಯಬರೆದರಾದರೂ, ತತ್ವಸರಣಿಯಲ್ಲಿ ಮೂವರ ಅಭಿಪ್ರಾಯಕ್ಕೂ ಅಲ್ಪ–ಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ. ಆದರೆ ಈ ಮಹನೀಯರ ನಿರಾಡಂಬರವಾದ ನಿಸ್ವಾರ್ಥಜೀವನ, ಅಲೌಕಿಕವಾದ ಮೇಧಾಶಕ್ತಿ, ಕಡುಮೂರ್ಖನನ್ನೂ ಸನ್ಮಾರ್ಗಕ್ಕೆ ತಿರುಗಿಸುವ ಚಮತ್ಕಾರ, ಸನಾತನ ಧರ್ಮವನ್ನು ತಮ್ಮ ಪ್ರಾಣವನ್ನಾದರೂ ಕೊಟ್ಟು ಕಾಪಾಡುವ ಧೀರತನ, ಪಂಡಿತ–ಪಾಮರರಲ್ಲಿದ್ದ ಸಮದೃಷ್ಟಿ ಮುಂತಾದ ಸದ್ಗುಣಗಳು ಜನರಿಗೆ ಅನುಕರಣೀಯಗಳಾಗಿವೆ. ಪ್ರಕೃತದಲ್ಲಿ ಮಧ್ವಾಚಾರ್ಯರ ಜೀವನದ ಕೆಲವು ಘಟನೆಗಳನ್ನು ಮಾತ್ರ ಸಂಗ್ರಹವಾಗಿ ತಿಳಿಸಲಾಗಿದೆ. ಮಧ್ವವಿಜಯವೆಂಬ ಗ್ರಂಥವು ಆಚಾರ್ಯರ ಜೀವನಚರಿತ್ರೆಯನ್ನು ವಿವರವಾಗಿ ತಿಳಿಸುತ್ತದೆ.

ಭಾರತದ ಪಶ್ಚಿಮ ಸಮುದ್ರತೀರದಲ್ಲಿ "ರಜತಪೀಠಪುರ"ಎಂಬ ಒಂದು ಪವಿತ್ರಕ್ಷೇತ್ರವಿದೆ. ಈಗ ಈ ನಗರವು 'ಉಡುಪಿ' ಎಂಬ ಹೆಸರಿನಿಂದ ಪ್ರಸಿದ್ಧಿಪಡೆದಿದೆ. ಉಡುಪಿಯಲ್ಲಿರುವ ಅನಂತೇಶ್ವರನ ದೇವಾಲಯದಲ್ಲಿ

ಅನಂತೇಶ್ವರನ ಪೀಠವು ರಜತಮಯವಾಗಿರುವುದರಿಂದ ಆ ಪುರಿಯು 'ರಜತಪೀಠಪುರ' ಎಂಬ ಅನ್ವರ್ಥನಾಮವನ್ನು ಪಡೆದಿರುತ್ತದೆ; ಈ ಪುರಕ್ಕೆ ಸಮೀಪದಲ್ಲಿರುವ ದೇವಗಿರಿ ಎಂಬ ಬೆಟ್ಟದ ಕೆಳಗೆ 'ಶಿವರೂಪ್ಯ' ಎಂಬ ಚಿಕ್ಕ ಹಳ್ಳಿಯೊಂದಿದೆ. ಇದನ್ನು ಹಳ್ಳಿ ಎನ್ನುವುದಕ್ಕಿಂತಲೂ ಋಷ್ಯಾಶ್ರಮವೆಂದು ಕರೆದರೆ ತಪ್ಪಾಗಲಾರದು. ಅಲ್ಲಿ ಅಧಿಕಸಂಖ್ಯೆಯಲ್ಲಿ ವಿದ್ವಾಂಸರೇ ವಾಸವಾಗಿದ್ದರು. ಆ ಹಳ್ಳಿಯಲ್ಲಿ ಸದಾಚಾರ ಸಂಪನ್ನನೂ, ದೈವಭಕ್ತನೂ ಆದ 'ಮಧ್ಯಗೇಹಭಟ್ಟ'ನೆಂಬ ವಿದ್ವಾಂಸನು ವಾಸವಾಗಿದ್ದನು. ಹಳ್ಳಿಯ ಮಧ್ಯದ ಮನೆಯಲ್ಲಿ ಈತನು ವಾಸಮಾಡುತ್ತಿದ್ದುದರಿಂದ ಪ್ರಾಯಶಃ ಈ ಹೆಸರು ಬಂದಿರಬಹುದೆಂದು ತೋರುತ್ತದೆ. 'ಭಟ್ಟ' ಎಂಬ ಶಬ್ದವು ಇವರಿಗೆ ಪಂಡಿತಮಂಡಲಿಯಿಂದ ಕೊಡಲ್ಪಟ್ಟ ಬಿರುದಾಗಿತ್ತು. ಆದಕಾರಣ ಇವರನ್ನು 'ಭಟ್ಟರು' ಎಂಬುದಾಗಿಯೇ ಜನರು ಕರೆಯುತ್ತಿದ್ದರು. ಸ್ವಲ್ಪಕಾಲದ ಮೇಲೆ ಭಟ್ಟರು ಶಿವರೂಪ್ಯ ಗ್ರಾಮವನ್ನು ಬಿಟ್ಟು ಅಲ್ಲಿಂದ ಉಡುಪಿಗೆ ದಕ್ಷಿಣ ದಿಕ್ಕಿನಲ್ಲಿರುವ 'ಪಾಜಕಕ್ಷೇತ್ರ'ಕ್ಕೆ ಬಂದು ನೆಲೆಸಿದರು. ಭಟ್ಟರು ತಮ್ಮ ಯೋಗ್ಯತೆಗೆ ತಕ್ಕಂತೆ ಸತ್ಕುಲ ಪ್ರಸೂತಳಾದ 'ವೇದವತೀ' ಎಂಬ ಕನ್ನಿಕೆಯನ್ನು ವಿವಾಹವಾಗಿ, ಪರೋಪಕಾರ, ಅತಿಥಿಸತ್ಕಾರ ಮುಂತಾದ ಸಮಾಜ ಸೇವಾಕಾರ್ಯಗಳಲ್ಲಿ ನಿರತರಾಗಿ ಆಕ್ಷೇತ್ರದ ಸಕಲರ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾಗಿದ್ದರು. ಭಟ್ಟರ ಸದ್ಗುಣಗಳಿಂದ ಆಕರ್ಷಿಸಲ್ಪಟ್ಟ ಅಲ್ಲಿಯ ಪ್ರಜಾವರ್ಗದವರು ಅವರನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆದರೆ ಚಿಕ್ಕ ವಯಸ್ಸಿನಲ್ಲೇ ಇಬ್ಬರು ಗಂಡು ಮಕ್ಕಳೂ ತೀರಿಕೊಂಡರು. ಅನಂತರ ಭಟ್ಟರಿಗೆ ಬಹಳಕಾಲ ಮಕ್ಕಳಾಗದೆ, 'ಸದ್ಗತಿಗೆ ಕಾರಣವಾದ ಸತ್ಸಂತತಿ ಪಡೆಯಲಿಲ್ಲವಲ್ಲಾ' ಎಂಬ ಚಿಂತೆ ದಿನದಿನಕ್ಕೆ ಅವರಿಗೆ ಹೆಚ್ಚಿತು. ಸತಿಪತಿಗಳಿಬ್ಬರೂ ಕುಲದೇವನಾದ ಅನಂತೇಶ್ವರನಲ್ಲಿ ತಮ್ಮ ಮನೋವ್ಯಥೆಯನ್ನು ಬಿನ್ನವಿಸಿಕೊಂಡರು. ಹನ್ನೆರಡು ವರ್ಷಗಳಕಾಲ ಅನೇಕ ವ್ರತಗಳಿಂದ ಶರೀರವನ್ನು ದಂಡಿಸಿ, ಅನಂತೇಶನನ್ನು ಆರಾಧಿಸಿದರು. ಇದರ ಫಲವಾಗಿ ಅನಂತೇಶ್ವರನ ಅನುಗ್ರಹವು ದಂಪತಿಗಳಿಗೆ ದೊರೆಯಿತು. ವೇದವತೀದೇವಿಯು ಕೂಡಲೇ ಗರ್ಭವನ್ನು ಧರಿಸಿ, ಕ್ರಿ. ಶ. ೧೧೧೮ನೇ ವಿಳಂಬಿನಾಮ ಸಂವತ್ಸರದಲ್ಲಿ ಸಕಲ ಲಕ್ಷಣ ಸಂಪನ್ನನಾದ ಪುತ್ರರತ್ನವೊಂದಕ್ಕೆ ಜನ್ಮವಿತ್ತಳು.

ಆಸ್ತಿಕಶಿರೋಮಣಿಗಳಾದ ಭಟ್ಟರು ಎಂದಿನಂತೆ ಅನಂತೇಶ್ವರನ

ದರ್ಶನ ಪಡೆದು ಮನೆಗೆ ಬರುತ್ತಾ ಮಧ್ಯದಾರಿಯಲ್ಲಿಯೇ ಆಪ್ತಮಿತ್ರರಿಂದ ಪುತ್ರೋತ್ಸವದ ವಿಚಾರವನ್ನು ತಿಳಿದು, ಅವರಿಗೆ ಕೃತಜ್ಞತೆಯನ್ನು ಸಮರ್ಪಿಸಿ, ಇಷ್ಟದೇವನನ್ನು ಮನದಲ್ಲಿ ನೆನೆಯುತ್ತಾ ಮನೆಗೆ ಬಂದು ಪುತ್ರಮುಖಾವ ಲೋಕನದಿಂದ ಸಂತುಷ್ಟಚಿತ್ತರಾದರು. ಅನಂತೇಶ್ವರನ ಕೃಪೆಗೆ ಪಾತ್ರರಾದ ಭಟ್ಟರ ಭಾಗ್ಯೋದಯವನ್ನು ಜನರು ಕೊಂಡಾಡಿದರು. ಭಟ್ಟರು ಹನ್ನೊಂದ ನೆಯ ದಿನ ಆಪ್ತರನ್ನು ಬರಮಾಡಿಕೊಂಡು, ಗುರುಹಿರಿಯರ ಸಮಕ್ಷಮದಲ್ಲಿ ಮಗುವಿಗೆ 'ವಾಸುದೇವ' ಎಂಬ ಹೆಸರನ್ನಿಟ್ಟು ಗುರುಗಳಿಂದ ಮಂಗ ಳಾಶೀರ್ವಾದಗಳನ್ನು ಮಾಡಿಸಿ, ಅತಿಥಿ-ಅಭ್ಯಾಗತರನ್ನು ಯಥಾಶಕ್ತಿ ಸತ್ಕರಿಸಿದರು.

ಮೂರು ತಿಂಗಳು ಕಳೆದ ನಂತರ ಭಟ್ಟರು ತನಗೆ ಸತ್ಸಂತತಿಯನ್ನು ಕರುಣಿಸಿದ ಅನಂತೇಶನ ಸೇವೆಗಾಗಿ ಮಗುವಿನೊಡನೆ ಮತ್ತು ಆಪ್ತರೊಡನೆ ಉಡುಪಿಗೆ ಬಂದರು. ಮಗುವನ್ನು ಅನಂತೇಶನ ಪಾದದಲ್ಲಿ ಸಮರ್ಪಿಸಿ, ಮಗುವಿಗೆ ಆಯಸ್ಸನ್ನೂ, ಶ್ರೇಯಸ್ಸನ್ನೂ, ಸಕಲಸೌಭಾಗ್ಯವನ್ನೂ ಕರುಣಿಸ ಬೇಕೆಂದು ಪ್ರಾರ್ಥಿಸಿದರು. ಪೂಜೆ ಮತ್ತು ಭೋಜನಾದಿಗಳನ್ನು ಮಾಡಿ ಕೊಂಡು ದೇವಾಲಯದಿಂದ ಹೊರಡಲು ಸಾಯಂಕಾಲವಾಯಿತು. ಉಡುಪಿ ಯಿಂದ ಪಾಜಕಕ್ಷೇತ್ರಕ್ಕೆ ಪ್ರಯಾಣ ಮಾಡುವ ದಾರಿ ಚೆನ್ನಾಗಿರಲಿಲ್ಲ. ಕಾಡುದಾರಿಯಲ್ಲೇ ಹೋಗಬೇಕಾಗಿತ್ತು. ಭಟ್ಟರು ತಮ್ಮೊಡನೆ ಬಹಳ ಮಂದಿ ಯಿದ್ದುದರಿಂದ ಮಗುವಿನೊಡನೆಯೂ, ಹೆಂಡತಿಯೊಡನೆಯೂ ಧೈರ್ಯದಿಂದ ತಮ್ಮೂರಿಗೆ ಹೊರಟರು. ಆಗ ಭೂತಸಂಚಾರದ ಕಾಲವಾಗಿತ್ತು. ಸಾಲ ದ್ದಕ್ಕೆ ಆ ದಾರಿಯಲ್ಲಿ ಪಿಶಾಚಿಗಳ ಕಾಟ ಬೇರೆ. ರಾತ್ರಿ ಆ ಕಾಡು ಹಾದಿಯಲ್ಲಿ ಬರುತ್ತಿರಲು ಭಟ್ಟರ ಪರಿವಾರದಲ್ಲಿ ಒಬ್ಬನ ಮೇಲೆ ಪಿಶಾಚಿಯು ಆವೇಶ ವಾಗಲು, ಅವನು ಅಪಸ್ವರದಿಂದ ಅರಚಿಕೊಳ್ಳಲು ಪ್ರಾರಂಭಿಸಿದನು. ಎಲ್ಲ ರಿಗೂ ಪಿಶಾಚಿಯು ಮಗುವನ್ನು ಏನು ಮಾಡುವುದೋ, ಎಂಬ ಚಿಂತೆ ಹತ್ತಿತ್ತು. ಇಷ್ಟರಲ್ಲೇ ಭೂತಗ್ರಸ್ತನಾದ ಮನುಷ್ಯನು ಆ ಗುಂಪಿನವರನ್ನು ಕುರಿತು "ಅಯ್ಯೋ ಹುಚ್ಚರೆ, ಈ ನಟ್ಟಿರುಳಲ್ಲಿ ಇಲ್ಲಿಗೆ ನೀವೇಕೆ ಬಂದಿರಿ? ಈ ಮಗುವು ಸಾಕ್ಷಾದ್ವಾಯು ದೇವನ ಅವತಾರವಾದ್ದರಿಂದ ಸರಿಹೋಯಿತು. ಈದಿನ ನಿಮ್ಮೊಡನೆ ಈ ಮಗುವೊಂದು ಇಲ್ಲದಿದ್ದಲ್ಲಿ ನಿಮ್ಮ ಪರಿಣಾಮವೇ ಕೆಡುತ್ತಿತ್ತು. ಈ ಮಗುವನ್ನು ಹಿಂಸಿಸುವ ಸಾಮರ್ಥ್ಯ ಭೂತಗಳಲ್ಲಿಲ್ಲ"

ಎಂದು ಅಬ್ಬರಿಸಿದನು. ಈ ಮಾತನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು. ಮಗುವಿನ ಮೇಲ್ಮೆಯನ್ನು ಕೊಂಡಾಡುತ್ತಾ ಅವರು ಊರನ್ನು ಸೇರಿದರು.

ವಾಸುದೇವನು (ಮಧ್ವಾಚಾರ್ಯರು) ವಾಯುದೇವನ ಅವತಾರವೆಂದು ಸ್ಪಷ್ಟವಾಯಿತು. ವಾಯುದೇವನು ತ್ರೇತಾಯುಗದಲ್ಲಿ ರಾಮಪ್ರಿಯ (ಹನುಮಂತ)ನಾಗಿಯೂ, ದ್ವಾಪರದಲ್ಲಿ ಭೀಮಸೇನನಾಗಿಯೂ, ಕಲಿಯುಗದಲ್ಲಿ ಮಧ್ವಾಚಾರ್ಯನಾಗಿಯೂ ಅವತರಿಸಿದನೆಂದು ಸಂಪ್ರದಾಯವು ಹೇಳುತ್ತದೆ

ಭೀಮಸೇನನಿಗೆ ಇದ್ದ ದೇಹದಾರ್ಢ್ಯವೇ ವಾಸುದೇವನಿಗೆ ಇತ್ತೆಂದು ಹೇಳುವ ಒಂದು ಕಥೆಯು ಆಶ್ಚರ್ಯವನ್ನುಂಟುಮಾಡುತ್ತದೆ. ವಾಸುದೇವನಿಗೆ ಇನ್ನೂ ಒಂದು ವರ್ಷ ತುಂಬಿರಲಿಲ್ಲ. ವೇದವತಿಯು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಕಾರ್ಯಾಂತರದಿಂದ ಹಿತೈಷಿಗಳೊಬ್ಬರ ಮನೆಗೆ ಹೋದಳು. ಮನೆಯಲ್ಲಿ ಹಿರಿಯ ಮಗಳಿದ್ದಳು. ಮಗುವು ಮಧ್ಯೆ ಎಚ್ಚರಗೊಂಡು ಅಳಲು ಪ್ರಾರಂಭಿಸಿತು. ಮಗಳು ಎಷ್ಟು ಆಡಿಸಿದರೂ ಮಗುವಿಗೆ ಸಮಾಧಾನವಾಗಲಿಲ್ಲ. ಆಕೆಯು ಉಪಾಯಾಂತರವನ್ನು ಕಾಣದೆ ಹಸುವಿಗಾಗಿ ಬೇಯಿಸಿ ಇಟ್ಟಿದ್ದ ಹುರುಳಿಯ ಕುಕ್ಕೆಯ ಮುಂದೆ ಮಗುವನ್ನು ಕೂರಿಸಿ, ಅಳುತ್ತಿದ್ದ ಮಗುವಿನ ಬಾಯಿಗೆ ಎರಡು ಹುರುಳೀಕಾಳುಗಳನ್ನು ಹಾಕಿದಳು. ಮಗುವು ಅಳುವುದನ್ನು ನಿಲ್ಲಿಸಿ ಅದನ್ನು ಚಪ್ಪರಿಸುತ್ತಾ ತಿಂದಿತು. ಕುದಿಸಿಟ್ಟಿದ್ದ ಹುರುಳಿಯೆಲ್ಲವನ್ನೂ ಮಗುವು ತಿಂದು ಮುಗಿಸಿತು. ಮತ್ತೆ ತೊಟ್ಟಿಲಲ್ಲಿ ಆಡುತ್ತಾ ಮಲಗಿತು. ವೇದವತಿಯು ಮನೆಗೆ ಬಂದಳು. ಆಡುತ್ತಿದ್ದ ಕೂಸನ್ನು ಎತ್ತಿಕೊಂಡಳು. ಮಗಳನ್ನು 'ಏನಾದರು ಮಗು ಅತ್ತಿತೆ?' ಎಂದು ಕೇಳಿದಳು. ಮಗಳು ನಡೆದ ವಿಚಾರವನ್ನು ತಾಯಿಗೆ ತಿಳಿಸಿದಳು. ವೇದವತಿಗೆ ಗಾಬರಿಯಾಯಿತು. "ಎಂಟು ತಿಂಗಳಿನ ಮಗು ಅಷ್ಟೊಂದು ಹುರುಳಿಯನ್ನು ತಿನ್ನುವುದೆಂದರೇನು? ಜೀರ್ಣವಾಗುತ್ತದೆಯೆ?" ಎಂದು ಮಗಳ ಮೇಲೆ ಕೋಪಿಸಿಕೊಂಡು ಯಜಮಾನರಿಗೆ ತಿಳಿಸಿದಳು. ಭಟ್ಟರು ಭೀಮನನ್ನು ಸ್ಮರಿಸುತ್ತಾ ಮಗುವಿನ ಹೊಟ್ಟೆಯಮೇಲೆ ಕೈಯಾಡಿಸಿದರು.

ಇನ್ನೊಂದು ದಿನ ಮತ್ತೊಂದು ಪ್ರಮಾದ ಸಂಭವಿಸಿತು. ವಾಸು

ದೇವನು ಎಲ್ಲರೂ ಏಳುವುದಕ್ಕಿಂತ ಮುಂಚೆ ಎದ್ದು ಕಾಡಿಗೆ ಮೇಯಲು ಹೊರಟಿದ್ದ ಒಂದು ಹೋರಿಯ ಬಾಲಕ್ಕೆ ಜೋತುಬಿದ್ದು, ಅದರೊಡನೆ ತಾನೂ ಕಾಡಿಗೆ ಹೋದನು. ತಾಯಿತಂದೆಗಳು ಎದ್ದವರು ಮಗುವನ್ನು ಕಾಣದೆ ಊರಿನಲ್ಲೆಲ್ಲಾ ಹುಡುಕಿ, ಯೋಚನಾಪರರಾದರು. ಪುನಃ ಸಂಜೆ ಆ ಹೋರಿಯ ಬಾಲದಲ್ಲಿ ಜೋತುಬಿದ್ದು ಊರಿಗೆ ಬಂದನು. ತಾಯಿ-ತಂದೆ ಗಳು ಮಗುವನ್ನಪ್ಪಿಕೊಂಡು ರಕ್ಷೆಯನ್ನಿಟ್ಟರು.

ಮಗುವಿಗೆ ಮೂರನೆಯ ವಯಸ್ಸು ಪ್ರಾಪ್ತವಾಗಲು, ಭಟ್ಟರು ಅಕ್ಷರಾ ಭ್ಯಾಸ ಕರ್ಮವನ್ನಾಚರಿಸಿ ಅಕ್ಷರಗಳನ್ನು ಹಾಕಿಕೊಟ್ಟರು. ವಾಸುದೇವನು ಎರಡೇ ದಿನಗಳಲ್ಲಿ ಅಕ್ಷರಗಳನ್ನೆಲ್ಲಾ ಕಲಿತನು. ಎಲ್ಲರೂ ಆಶ್ಚರ್ಯಪಡುವಂತೆ ಪುಸ್ತಕಗಳನ್ನು ಓದಲು ಪ್ರಾರಂಭಿಸಿದನು. ಮನುಷ್ಯನು ವಯಸ್ಸಾದ ಮೇಲೆ ನಡೆಸುವ ಕಾರ್ಯಗಳು ಅವನ ಬಾಲ್ಯದಲ್ಲೇ ಸೂಚಿತವಾಗುವುವು. ಬಾಲ್ಯದಲ್ಲಿ ಸುಳ್ಳು ಹೇಳುವವನು ವಯಸ್ಸಾದ ಮೇಲೆ ಸರಿಯಾದ ಸುಳ್ಳುಗಾರನಾಗುತ್ತಾನೆ. ಬಾಲ್ಯದಲ್ಲಿ ಕಳ್ಳತನ ಅಭ್ಯಾಸಮಾಡಿದರೆ, ವಯಸ್ಸಾದ ಮೇಲೆ ಅದು ಮತ್ತಷ್ಟು ಹೆಚ್ಚಿ ಪಕ್ಕಕಳ್ಳನಾಗುತ್ತಾನೆ. ಬಾಲ್ಯದಲ್ಲಿಯೇ ವಿದ್ಯೆಯಲ್ಲಿ ಅಭಿರುಚಿ, ದೇವರಲ್ಲಿ ಭಕ್ತಿ ಗುರುಹಿರಿಯರಲ್ಲಿ ಗೌರವ ಇವು ಬೆಳೆದರೆ, ವಯಸ್ಸಾದ ಮೇಲೆ ಆ ಸದ್ಗುಣ ಗಳು ಹೆಚ್ಚಿ, ಅವನು ಸತ್ಪುರುಷನಾಗಿ, ಪರೋಪಕಾರ ಮಾಡುತ್ತಾ, ಸಮಾಜ ದಲ್ಲಿ ಗಣ್ಯಸ್ಥಾನವನ್ನು ಪಡೆದು ಅನೇಕ ಮಹತ್ತ್ವದ ಕಾರ್ಯಗಳನ್ನು ಸಾಧಿಸು ತ್ತಾನೆ. ವಾಸುದೇವನು ಮುಂದೆ ಮಹಾಪುರುಷನಾಗುವನೆಂಬುವುದನ್ನು ಬಾಲ್ಯದಲ್ಲಿ ಅವನಿಗಿದ್ದ ಬುದ್ಧಿಶಕ್ತಿಯಿಂದಲೂ. ಧೈರ್ಯದಿಂದಲೂ, ದೈವಭಕ್ತಿ ಯಿಂದಲೂ ತಿಳಿಯಬಹುದಾಗಿತ್ತು.

ಆಗಿನ ಕಾಲದಲ್ಲಿ ಮಹರ್ಷಿಗಳಿಂದ ರಚಿತವಾದ ಪುರಾಣಗಳನ್ನೋದಿ ಅರ್ಥ ಹೇಳುವ ವಾಡಿಕೆಯಿತ್ತು. ಜನರೂ ಅಕ್ಕರೆಯಿಂದ ಕೇಳಿ, ತಮ್ಮ ನಡೆನುಡಿಗಳನ್ನು ತಿದ್ದಿಕೊಳ್ಳುತ್ತಿದ್ದರು. ಪುರಾಣ ನಡೆಯುವ ಸ್ಥಳಕ್ಕೆ ವಾಸುದೇವನು ತಪ್ಪದೆ ಹೋಗುತ್ತಿದ್ದನು. ಪುರಾಣೀಕರ ಪ್ರವಚನದಲ್ಲಿ ಸ್ಖಾಲಿತ್ಯಗಳು ತೋರಿದಲ್ಲಿ ಅದನ್ನು ತಿದ್ದುವನು. ಪುರಾಣದ ಸಭೆಗಳಲ್ಲಿ ಪಂಡಿತರಿಗೂ ಒಪ್ಪುವಂತೆ ಅರ್ಥ ಹೇಳುತ್ತಿದ್ದ ಚಿಕ್ಕ ವಾಸುದೇವನ ಜಾಣ್ಮೆ ಯನ್ನು ನೋಡಿ ಜನರು ಇವನು ಸಾಧಾರಣ ,ಬಾಲಕನಲ್ಲ; ದೈವಾಂಶ ಸಂಭೂತನು" ಎಂಬುದಾಗಿ ಆಡಿಕೊಳ್ಳುತ್ತಿದ್ದರು. ವಾಸುದೇವನು ತನ್ನ

ನಾಲ್ಕನೆಯ ವಯಸ್ಸಿನಲ್ಲಿಯೇ ಇಷ್ಟು ಪ್ರತಿಭೆಯನ್ನು ಸಂಪಾದಿಸಿದ್ದನು ಈ ವಯಸ್ಸಿನಲ್ಲಿಯೇ ಕಾಡುದಾರಿಯಲ್ಲಿ ನಡೆದು ಉಡುಪಿಗೆ ಹೋಗಿ ದೇವರ ದರ್ಶನ ಪಡೆದು ಹರ್ಷದಿಂದ ತನ್ನ ಹಳ್ಳಿಗೆ ಬರುತ್ತಿದ್ದನು. ವಾಸುದೇವನಲ್ಲಿ ಚಿಕ್ಕಂದಿನಿಂದಲೇ ಧೈರ್ಯ, ವಿದ್ಯೆಯಲ್ಲಿ ಆಸಕ್ತಿ, ದೈವಭಕ್ತಿ ಮುಂತಾದುವುಗಳು ಬಳೆದುವು

ಮಗನ ಪ್ರತಿಭೆಯನ್ನು ನೋಡಿ ಭಟ್ಟರು ಅವನಿಗೆ ಶಾಸ್ತ್ರಗಳಲ್ಲಿಯೂ ಶಿಕ್ಷಣ ಕೊಡಬೇಕೆಂದು ಐದನೆಯ ವಯಸ್ಸಿನಲ್ಲಿ ಉಪನಯನ ಮಾಡಿದರು. ಅದೇ ಊರಿನ ಪಾಠಶಾಲೆಯಲ್ಲಿ ಪಾಠಹೇಳುತ್ತಿದ್ದ ಪಂಡಿತರಲ್ಲಿಗೆ ಶಾಸ್ತ್ರಾಭ್ಯಾಸ ಮಾಡಿಸುವ ಸಲುವಾಗಿ ಭಟ್ಟರು ಮಗನನ್ನು ಕಳುಹಿಸಿಕೊಟ್ಟರು. ವಾಸುದೇವನು ಗುರುಕುಲದಲ್ಲಿ ವಾಸಮಾಡುತ್ತಾ, ಕಾವ್ಯನಾಟಕಗಳನ್ನೂ ಓದಿದನು. ಅವನ ಬುದ್ಧಿಶಕ್ತಿಗಾಗಿ ಗುರುಗಳೇ ಆಶ್ಚರ್ಯಪಡುತ್ತಿದ್ದರು. ಒಂದು ದಿನ ವಾಸುದೇವನು "ಮುಕುಂದನ ಪಾದದಲ್ಲಿ ಭಕ್ತಿಯಿಡುವುದೇ ಉಪನಿಷತ್ತಿನ ಸಾರ" ಎಂಬ ವಿಚಾರದಲ್ಲಿ ಗುರುಗಳ ಮುಂದೆ ಉಪನ್ಯಾಸ ಮಾಡಿದನು. ಉಪನ್ಯಾಸದ ಸರಣಿಯನ್ನು ಶ್ಲಾಘನೆಮಾಡುತ್ತಾ ಗುರುಗಳು "ನಿನ್ನಿಂದ ನನ್ನ ಹೃದಯದಲ್ಲೂ ಭಕ್ತಿಯು ಅಂಕುರಿಸಿತು; ನಿನ್ನಿಂದ ಸಲ್ಲಬೇಕಾದ ಗುರುದಕ್ಷಣೆ ನನಗೆ ಸೇರಿತು; ನಿನ್ನಿಂದ ಲೋಕಕ್ಕೆ ಉಪಕಾರವಾಗಬೇಕು; ನಿನ್ನ ವಿದ್ಯಾಭ್ಯಾಸ ಇಂದಿಗೆ ಪೂರ್ತಿಯಾಗಿದೆ; ಮಾನವ ಕಲ್ಯಾಣಕ್ಕಾಗಿ ಈ ಭಕ್ತಿಮಾರ್ಗವನ್ನು ಪ್ರಚಾರಮಾಡು; ನಿನಗೆ ಸಕಲ ಶ್ರೇಯಸ್ಸೂ ಉಂಟಾಗಲಿ" ಎಂಬುದಾಗಿ ಆಶೀರ್ವದಿಸಿ ಕಳುಹಿಸಿಕೊಟ್ಟರು.

ವಿದ್ಯಾಭ್ಯಾಸವನ್ನು ಮುಗಿಸಿ ವಾಸುದೇವನು ಮನೆಗೆ ಹಿಂತಿರುಗಿ ತಾಯಿ-ತಂದೆಗಳಿಗೆ ನಮಸ್ಕರಿಸಿದನು. ವಿದ್ಯಾಪಾರಂಗತನಾದ ಮಗನ ಮುಖವನ್ನು ನೋಡಿ ತಾಯಿತಂದೆಗಳು ಆನಂದಪಟ್ಟರು. ರೂಪವತಿಯಾದ ಕನ್ನಿಕೆಯನ್ನು ತಂದು ಮಗನಿಗೆ ವಿವಾಹಮಾಡಿ, ಗೃಹಸ್ಥಾಶ್ರಮಿಯನ್ನಾಗಿ ಮಾಡಬೇಕೆಂದು ತಂದೆತಾಯಿಗಳು ಚಿಂತಿಸುತ್ತಿದ್ದರು. ವಾಸುದೇವನ ಚಿಂತೆ ಇದಕ್ಕೆ ವಿರುದ್ಧವಾಗಿತ್ತು 'ಮಾನವ ಕಲ್ಯಾಣಕ್ಕಾಗಿ ಭಕ್ತಿಮಾರ್ಗವನ್ನು ಪ್ರಚಾರಮಾಡು" ಎಂಬ ಗುರುಗಳ ಮಾತು ಅವರ ಬೆನ್ನನ್ನು ಹತ್ತಿತು. ಭಕ್ತಿಮಾರ್ಗವನ್ನು ಸಾಧಿಸಲು ವಿಶೇಷವಾದ ಜ್ಞಾನವು ಅವಶ್ಯವಾಗಿ ಬೇಕು. ಸಂಸಾರಕೂಪದಲ್ಲಿ ಬಿದ್ದರೆ ಜ್ಞಾನದಾಹವು ಅಡಗುವುದಿಲ್ಲ. ಆದ್ದರಿಂದ

ಸಂಸಾರ ಕಾಂತಾರದಲ್ಲಿ ಸಿಕ್ಕಿಕೊಳ್ಳುವುದಕ್ಕಿಂತ, ಅಧಿಕ ಜ್ಞಾನಾರ್ಜನೆಗೆ ಅನುಕೂಲವಾಗುವ, ಯತ್ಯಾಶ್ರಮವನ್ನು ಸ್ವೀಕರಿಸುವುದೇ ಉತ್ತಮವಾದ ಮಾರ್ಗ, ಎಂಬುದಾಗಿ ವಾಸುದೇವ ಬಾಲಕನು ನಿಶ್ಚಯಿಸಿ, ಗುರುಗಳನ್ನು ಹುಡುಕಲು ಉಡುಪಿಗೆ ಬಂದನು. ಉಡುಪಿಯಲ್ಲಿ ಮಹಾ ಪಂಡಿತರಾದ ಪುರುಷೋತ್ತಮತೀರ್ಥರೆಂಬುವರು ವಾಸುದೇವನ ದೃಷ್ಟಿಗೆ ಬಿದ್ದರು. ವಾಸುದೇವನು ಅವರನ್ನಾಶ್ರಯಿಸಿ ಸೇವೆಮಾಡತೊಡಗಿದನು. ಭಟ್ಟರು ಮಗನನ್ನು "ವೃದ್ಧರಾದ ನಮ್ಮನ್ನು ರಕ್ಷಿಸುವುದು ಮಗನ ಕರ್ತವ್ಯ, ಆದುದರಿಂದ ನೀನು ಗೃಹಸ್ಥನಾಗು" ಎಂದು ಬೇಡಿಕೊಂಡರು. ಆಗ ವಾಸುದೇವನು "ತಮ್ಮ ರಕ್ಷಣೆಗೆ ಮತ್ತೊಬ್ಬ ಪುತ್ರನು ಹುಟ್ಟುವವರೆವಿಗೂ ನಾನು ಸನ್ಯಾಸ ಸ್ವೀಕಾರ ಮಾಡುವುದಿಲ್ಲ. ಅನಂತರ ನೀವು ನನ್ನನ್ನು ತಡೆಯಕೂಡದು," ಎಂದು ತಂದೆಗೆ ಸಮಾಧಾನ ಮಾಡಿ ಕಳುಹಿಸಿದನು. ಸ್ವಲ್ಪ ಕಾಲದಮೇಲೆ ಭಟ್ಟರಿಗೆ ಮತ್ತೊಂದು ಗಂಡು ಸಂತಾನವಾಯಿತೆಂದು ಕೇಳಿ, ವಾಸುದೇವನು ತಂದೆ ತಾಯಿಗಳ ಅನುಮತಿಯನ್ನು ಪಡೆದು, ಪುರುಷೋತ್ತಮ ತೀರ್ಥರಲ್ಲಿ ಯತ್ಯಾಶ್ರಮವನ್ನು ಕೊಡಬೇಕೆಂದು ಬೇಡಿದನು. ಪುರುಷೋತ್ತಮತೀರ್ಥರು ಅನಂತೇಶ್ವರನ ಸಮಕ್ಷಮದಲ್ಲಿ ವಾಸುದೇವನಿಗೆ 'ಪೂರ್ಣಪ್ರಜ್ಞ' ಎಂಬ ಹೊಸ ನಾಮವನ್ನಿಟ್ಟು ದಂಡ, ಕಾಷಾಯವಸ್ತ್ರಗಳನ್ನು ಕೊಟ್ಟರು. ಪೂರ್ಣಪ್ರಜ್ಞರು ಬಾಲಯತಿಗಳಾಗಿ ಲೋಕಸೇವೆ ಮಾಡಲು ಬದ್ಧಕಂಕಣರಾದರು.

ಪೂರ್ಣಪ್ರಜ್ಞರು ಸನ್ಯಾಸ ಸ್ವೀಕರಿಸಿದಾಗ ಕೇವಲ ಹನ್ನೆರಡು ವರ್ಷ ವಯಸ್ಸು. ಶಾಸ್ತ್ರಗಳ ಚರ್ಚೆಯಲ್ಲಿಯೇ ತಮ್ಮ ಕಾಲವನ್ನೆಲ್ಲಾ ಕಳೆಯುತ್ತಿದ್ದರು. ಸಂದಿಗ್ಧ ವಿಷಯಗಳು ಸಭೆಯಲ್ಲಿ ಚರ್ಚೆಗೆ ಬಂದಾಗ ಪೂರ್ಣಪ್ರಜ್ಞರು ಶಂಕಾಸಮಾಧಾನಗಳ ಪೂರ್ವಕವಾಗಿ ವಿಷಯಗಳನ್ನು ಸಿದ್ಧಾಂತ ಮಾಡುತ್ತಿದ್ದರು. ಇವರ ಪ್ರತಿಭೆ ಎಲ್ಲೆಲ್ಲೂ ಹರಡಿತು. ಪರೀಕ್ಷಿಸಲು ವಾಸುದೇವಾಚಾರ್ಯರೆಂಬ ವಿದ್ವಾಂಸರು ಪೂರ್ಣಪ್ರಜ್ಞರಲ್ಲಿಗೆ ಬಂದು ಮೂರು ದಿನಗಳು ವಾಗ್ವಾದ ನಡೆಸಿ ಪರಾಜಿತರಾದರು. ಅವರ ವಾದದ ಸರಣಿಯ ಮುಂದೆ ಯಾರೂ ಎದುರಾಗಿ ನಿಲ್ಲಲು ಸಮರ್ಥರಿರಲಿಲ್ಲ. ಪೂರ್ಣಪ್ರಜ್ಞರಿಗೆ ಭಾಗವತವನ್ನು ಓದುವುದರಲ್ಲಿ ಬಹಳ ಪ್ರೀತಿ. ಭಾಗವತದ ಮೇಲೆ ಅವರು ಉಪನ್ಯಾಸ ಕೊಡುತ್ತಾರೆಂದರೆ ಸಾವಿರಾರು ಮಂದಿ ನೆರೆಯುತ್ತಿದ್ದರು. ಅವರ ಪುರಾಣ ಪ್ರವಚನದ ಶೈಲಿಯನ್ನು ಕೇಳಿ ಪಂಡಿತರು ತಲೆತೂಗುತ್ತಿದ್ದರು. ತಂದೆಯಾದ

ಮಧ್ಯಗೇಹ ಭಟ್ಟರೂ ಸಹ ಮಗನ ಪ್ರತಿಭೆಯನ್ನು ನೋಡಿ, 'ಪ್ರಜ್ಞಾನಿಧಿಯಾದ ಮಗನನ್ನು ಪಡೆದ ನಾನೇ ಭಾಗ್ಯಶಾಲಿ" ಎಂದು ಹೇಳಿಕೊಂಡು ಸಮಾಧಾನಚಿತ್ತರಾದರು. ಎರಡು ವರ್ಷಗಳು ಕಳೆಯಿತು. ಪುರುಷೋತ್ತಮ ತೀರ್ಥರಿಗೆ ಪೂರ್ಣಪ್ರಜ್ಞರು ಒಂದು ಸ್ವತಂತ್ರವಾದ ಮಠಾಧಿಕಾರವನ್ನು ನಿರ್ವಹಿಸಲು ಸಮರ್ಥರಿರುವರೆಂದು ಅರಿವಾಯಿತು, ಕೂಡಲೆ ಗುರುಗಳು ಶಿಷ್ಯನಿಗೆ ಮಠಾಧಿಪತ್ಯದಲ್ಲಿ ಪಟ್ಟಾಭಿಷೇಕ ಮಾಡಿ "ಆನಂದತೀರ್ಥ" ಎಂಬ ಹೊಸ ನಾಮಕರಣ ಮಾಡಿ ಆಶೀರ್ವದಿಸಿದರು.

ಆನಂದತೀರ್ಥರು ಸ್ವತಂತ್ರ ಮಠಾಧಿಪತಿಗಳಾದರು. ತಮ್ಮ ತತ್ವ ಪ್ರಚಾರಕ್ಕಾಗಿ ದೇಶಸಂಚಾರ ಮಾಡಿಕೊಂಡು ಬರಬೇಕೆಂಬ ಉದ್ದೇಶದಿಂದ, ಗುರುಗಳಾದ ಪುರುಷೋತ್ತಮ ತೀರ್ಥರೊಡನೆಯೂ, ಶಿಷ್ಯಮಂಡಲಿಯೊಡನೆಯೂ ಉಡುಪಿಯಿಂದ ಯಾತ್ರೆ ಹೊರಟರು. ಅವರು ಮಂಗಳೂರು ಮಾರ್ಗವಾಗಿ ಪ್ರಯಾಣಮಾಡಿ 'ವಿಷ್ಣುಮಂಗಲ' ಎಂಬ ಕ್ಷೇತ್ರಕ್ಕೆ ಬಂದರು. ಅಲ್ಲಿ ಒಬ್ಬ ಗೃಹಸ್ಥನ ಮನೆಯಲ್ಲಿ ಆಚಾರ್ಯರಿಗೆ ಪಾದಪೂಜೆ ನಡೆಯಿತು. ಊಟ ಉಪಚಾರಗಳಾದ ಮೇಲೆ ಮನೆಯ ಯಜಮಾನನು ಆನಂದತೀರ್ಥರಿಗಾಗಿಯೇ ತೆಗೆಸಿಟ್ಟಿದ್ದ ಇನ್ನೂರು ಹಣ್ಣುಗಳುಳ್ಳ ರಸಬಾಳೆಯ ಗೊನೆಯನ್ನು ಅವರ ಮುಂದಿರಿಸಿ ಸ್ವೀಕರಿಸಬೇಕೆಂದು ಬೇಡಿದನು. ಆನಂದ ತೀರ್ಥರು ಹಸನ್ಮುಖದಿಂದ ಬಾಳೇ ಹಣ್ಣಿನ ಗೊನೆಯನ್ನು ತೆಗೆದುಕೊಂಡು ಅಷ್ಟು ಹಣ್ಣುಗಳನ್ನೂ ತಿಂದು ಮುಗಿಸಿದರು. ಬಾಲ್ಯದಲ್ಲಿಯೇ ಇವರಿಗೆ ವಿಶೇಷವಾದ ಜೀರ್ಣಶಕ್ತಿ ಇತ್ತೆಂದು ನಮಗೆ ಪರಿಚಯವಾಗಿದೆ. ಮೃಷ್ಟಾನ್ನ ಭೋಜನಾನಂತರ ಇನ್ನೂರು ಬಾಳೆಯಹಣ್ಣುಗಳನ್ನು ತಿಂದು ಸ್ವಲ್ಪವೂ ಆಯಾಸವಿಲ್ಲದೆ ಒಂದೇ ಸ್ಥಿತಿಯಲ್ಲಿರುವ ಆಚಾರ್ಯರನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಇದರಿಂದ ಭೀಮಸೇನನ ದೇಹದಾರ್ಢ್ಯವೇ ಆಚಾರ್ಯರಿಗೂ ಇರುವುದೆಂದು ನಾವು ಊಹಿಸಬಹುದು.

ಅಲ್ಲಿಂದ ಮುಂದಕ್ಕೆ ಆಚಾರ್ಯರು ತಿರುವಾಂಕೂರಿನ ಮುಖ್ಯ ನಗರವಾದ ತಿರುವನಂತಪುರಕ್ಕೆ ಬಂದರು. ಅಲ್ಲಿ ಭಾಗವತದ ಮೇಲೆ ಉಪನ್ಯಾಸ ನಡೆಯಿತು. ಧಾರ್ಮಿಕ ವಿಷಯಗಳ ಮೇಲೂ ಉಪನ್ಯಾಸಗಳು ನಡೆದುವು. ಅಲ್ಲಿಂದ ಆನಂದತೀರ್ಥರು ರಾಮೇಶ್ವರಕ್ಕೆ ಪ್ರಯಾಣಮಾಡಿ, ಅಲ್ಲಿ ಕೆಲವು ದಿನಗಳಿದ್ದು ಶ್ರೀರಂಗಕ್ಕೆ ಬಂದರು. ಶ್ರೀರಂಗದಿಂದ ಮಧುರೆಗೆ ಬಂದರು.

ಆಗ ಮಧುರೆಯಲ್ಲಿ ದೊಡ್ಡ ವಿದ್ಯಾಪೀಠವಿತ್ತು. ಆಚಾರ್ಯರು ತಮ್ಮ ವಿದ್ಯಾ ಪ್ರೌಢಿಮೆಯಿಂದ ಅಲ್ಲಿನ ಪಂಡಿತರಿಂದಲೂ ಸನ್ಮಾನಿತರಾದರು. ಅಲ್ಲಿಂದ ಅವರು ಎಲ್ಲರೊಡನೆ ಪ್ರಯಾಣಮಾಡಿ ಪುನಃ ಉಡುಪಿಗೆ ಬಂದು ಸೇರಿದರು.

ಉಡುಪಿಗೆ ಬಂದಮೇಲೆ ಆನಂದತೀರ್ಥರಿಗೆ ವ್ಯಾಸಮಹರ್ಷಿಗಳ ನಿವಾಸ ಸ್ಥಾನವಾದ ಬದರಿಕಾಶ್ರಮಕ್ಕೆ ಹೋಗಿಬರಬೇಕೆಂಬ ಅಪೇಕ್ಷೆಯುಂಟಾಯಿತು. ಗುರುಗಳ ಅಪ್ಪಣೆ ಪಡೆದು ಮಿತಪರಿವಾರದೊಂದಿಗೆ ಪ್ರಯಾಣ ಮಾಡಿದರು. ಮಧ್ಯೆ ದಾರಿಯಲ್ಲಿ ಪ್ರಯಾಣ ಮಾಡುತ್ತಲೆ ಶ್ರೀಕೃಷ್ಣನಿಂದ ಅರ್ಜುನನಿಗೆ ಉಪದಿಷ್ಟವಾದ ಗೀತೆಗೆ ಭಾಷ್ಯವನ್ನು ರಚಿಸಿದರು. ಮುಂದಕ್ಕೆ ಪ್ರಯಾಣಮಾಡಿ ಕಾಶಿಗೆ ತಲಪಿ ಗಂಗಾ ಸ್ನಾನವನ್ನು ಮಾಡಿ ಅಲ್ಲಿಂದ ಬದರಿಕಾಶ್ರಮಕ್ಕೆ ಬಂದರು. ಕೊರೆಯುತ್ತಿದ್ದ ಹಿಮದ ರಾಶಿಯನ್ನು ಲೆಕ್ಕಿಸದೆ, ವ್ಯಾಸಾಶ್ರಮಕ್ಕೆ ಬಂದು ಅವರ ದರ್ಶನಲಾಭ ಪಡೆಯುವುದಕ್ಕಾಗಿ ನಲವತ್ತೆಂಟು ದಿನಗಳು ತಪಸ್ಸನ್ನಾಚರಿಸಿದರು. ಆನಂದತೀರ್ಥರ ತಪಸ್ಸಿಗೆ ತೃಪ್ತರಾದ ವೇದವ್ಯಾಸರು ಅವರಿಗೆ ದರ್ಶನವಿತ್ತರು. ಅವರನ್ನು ಕಂಡು ಆಚಾರ್ಯರು ವೇದವ್ಯಾಸರಿಗೆ ಪ್ರಣಾಮಮಾಡಿದರು. ಅವರನ್ನು ಹಿಡಿದೆತ್ತಿ ವ್ಯಾಸರು ಆಚಾರ್ಯರಿಗೆ ಹರಿಭಕ್ತಿಯ ಶ್ರೇಷ್ಠತೆಯನ್ನು ಉಪದೇಶಮಾಡಿದರು. ಆನಂದತೀರ್ಥರು ತಾವು ರಚಿಸಿದ ಗೀತಾಭಾಷ್ಯವನ್ನು ಮಹರ್ಷಿಗಳಿಗೆ ತೋರಿಸಿದರು. ಭಾಷ್ಯವನ್ನು ನೋಡಿ ಸಂತುಷ್ಟರಾದ ವ್ಯಾಸರು ಹೀಗೆಯೇ ಬ್ರಹ್ಮ ಸೂತ್ರಕ್ಕೂ ಭಾಷ್ಯ ಬರೆಯುವುದೆಂದು ಆಜ್ಞಾಪಿಸಿದರು. ಹೀಗೆ ವ್ಯಾಸರ ಅನುಗ್ರಹಕ್ಕೆ ಪಾತ್ರರಾದ ಆನಂದತೀರ್ಥರು ಅವರ ಅಪ್ಪಣೆಪಡೆದು ಪುನಃ ಉಡುಪಿಗೆ ಬಂದರು.

ಉಡುಪಿಗೆ ಬಂದವರು ಗ್ರಂಥಗಳ ರಚನೆಯಲ್ಲಿಯೇ ತಮ್ಮ ಕಾಲ ವನ್ನೆಲ್ಲಾ ಕಳೆದರು. ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದು ಮುಗಿಸಿದರು. ಹೀಗೆ ತೀರ್ಥರು ಒಟ್ಟು ಮೂವತ್ತೆಂಟು ಗ್ರಂಥಗಳನ್ನು ರಚಿಸಿದರು. ಒಂದು ದಿನ ಆಚಾರ್ಯರು ಸಮುದ್ರಸ್ನಾನಕ್ಕೆಂದು ಹೊರಟು ಶ್ರೀವಿಷ್ಣುವನ್ನು ಸ್ತೋತ್ರ ಮಾಡುತ್ತಾ ಸಮುದ್ರದ ದಡಕ್ಕೆ ಬಂದರು. ಆವೇಳೆಗೆ ಸರಿಯಾಗಿ ವರ್ತಕರ ಹಡಗೊಂದು ಬಿರುಗಾಳಿಗೆ ಸಿಕ್ಕಿ, ದಡ ತಲಪುವುದಕ್ಕೆ ಮುಂಚೆಯೇ ಅಪಾಯ ಕ್ಕೊಳಗಾಯಿತು. ವಿಷ್ಣುಸ್ತೋತ್ರದಲ್ಲಿ ನಿರತರಾದ ಆನಂದತೀರ್ಥರು

ವರ್ತಕರ ಹಡಗು ಅಪಾಯದಿಂದ ಪಾರಾಗಲೆಂದು ಪ್ರಾರ್ಥಿಸಿದರು. ಹಡಗು ಸುರಕ್ಷಿತವಾಗಿ ದಡವನ್ನು ಸೇರಿತು. ವರ್ತಕನ ಮುಖಂಡನು ಇವರ ಪ್ರಭಾವವನ್ನರಿತು, ತನ್ನ ಹಡಗಿನಲ್ಲಿದ್ದ ಸರ್ವಸ್ವವನ್ನೂ ಆನಂದತೀರ್ಥರಿಗೆ ಸಮರ್ಪಿಸಿದನು. ಆದರೆ ನಿಸ್ಪೃಹರಾದ ಆಚಾರ್ಯರು ಏನನ್ನೂ ಅವನಿಂದ ಅಪೇಕ್ಷಿಸದೆ ಚಂದನದ ಗಟ್ಟಿಯೊಂದನ್ನು ಮಾತ್ರ ತೆಗೆದುಕೊಂಡರು. ಆ ಗಟ್ಟಿಯಲ್ಲಿ ಶ್ರೀಕೃಷ್ಣವಿಗ್ರಹವು ಹುದುಗಿಕೊಂಡಿರುವುದೆಂದು ಯಾರು ಬಲ್ಲರು? ಜ್ಞಾನಿಗಳಿಗೆ ಮಾತ್ರವೇ ಅದು ತಿಳಿಯಬೇಕು. ಆನಂದತೀರ್ಥರು ಆ ಗಟ್ಟಿಯನ್ನು ತೆಗೆದುಕೊಂಡು ಬಂದು ಒಡೆದು ಅದರಲ್ಲಿದ್ದ ಪರಮಸುಂದರವಾದ ಶ್ರೀಕೃಷ್ಣವಿಗ್ರಹವೊಂದನ್ನು ಹೊರಕ್ಕೆ ತೆಗೆದರು. ಶುಭಮುಹೂರ್ತದಲ್ಲಿ ಭಕ್ತಮಂಡಲಿಯ ಸಮಕ್ಷಮದಲ್ಲಿ ವಿಜೃಂಭಣೆಯಿಂದ ಶ್ರೀಕೃಷ್ಣ ಪ್ರತಿಷ್ಠಾ ಮಹೋತ್ಸವವನ್ನು ಉಡುಪಿಯಲ್ಲಿ ನೆರವೇರಿಸಿದರು. ಆದಿನ ಉಡುಪಿಯಲ್ಲಿ ದೊಡ್ಡ ಉತ್ಸವವೇ ಜರುಗಿತು. ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಶ್ರೀಕೃಷ್ಣ ವಿಗ್ರಹಕ್ಕೆ ಪೂಜಾದಿಗಳು ಅಂದಿನಿಂದ ಪ್ರಾರಂಭಿಸಲ್ಪಟ್ಟು ಈಗಲೂ ಕ್ರಮವಾಗಿ ನಡೆಯುತ್ತಾ ಬಂದಿದೆ. ಆದ್ದರಿಂದಲೇ ಉಡುಪಿಯು ಒಂದು ಪುಣ್ಯಕ್ಷೇತ್ರವಾಗಿ ಪ್ರಸಿದ್ಧಿಗೆ ಬಂದು ಉತ್ತಮ ಯಾತ್ರಾಸ್ಥಳವಾಗಿರುತ್ತದೆ.

ಆನಂದ ತೀರ್ಥರು ತಾವು ಬರೆದಿದ್ದ ಭಾಷ್ಯವನ್ನು ವೇದವ್ಯಾಸರಿಗೆ ತೋರಿಸಿಬರಲು ಪುನಃ ಬದರಿಗೆ ಹೋಗಿ, ವ್ಯಾಸರಿಗೆ ತೋರಿಸಿ ಅವರ ಒಪ್ಪಿಗೆಯನ್ನು ಪಡೆದರು. ಶಿಷ್ಯಮಂಡಲಿಗೆ ಭಾಷ್ಯವನ್ನು ಬೋಧಿಸಿದರು. ದೇಶಸಂಚಾರ ಮಾಡಿ ಸಾಕಷ್ಟು ಅದನ್ನು ಪ್ರಚಾರಕ್ಕೆ ತಂದರು. ಅವರ ಅವತಾರ ಕೃತ್ಯವು ಸಮಾಪ್ತಿಯಾಗುತ್ತಾ ಬಂದಿತು, ಅವರು ೭೮ ವರ್ಷಗಳ ಕಾಲ ಪಟ್ಟದಲ್ಲಿದ್ದು, ತಾವು ಉದ್ದೇಶಿಸಿದ ಕೆಲಸಗಳನ್ನು ಸಾಧಿಸಿ, ಪ್ರಮುಖ ಶಿಷ್ಯರೊಂದಿಗೆ ವೇದವ್ಯಾಸರ ಸನ್ನಿಧಿಯನ್ನು ಹೊಂದಲು ಬದರಿಗೆ ಬಂದರು. ತಮ್ಮ ಮುಖ್ಯ ಶಿಷ್ಯರಾದ ಪದ್ಮನಾಭ ತೀರ್ಥರು, ನರಹರಿತೀರ್ಥರು, ಮಾಧವ ತೀರ್ಥರು, ಅಕ್ಷೋಭ್ಯತೀರ್ಥರು ಮುಂತಾದವರನ್ನು ಕುರಿತು "ನಾನು ವ್ಯಾಸರ ಸೇವೆಗಾಗಿ ಹೊರಟಿರುವೆನು; ನಮ್ಮಿಂದ ಪ್ರಾರಂಭಿಸಲ್ಪಟ್ಟ ಈ ಸಿದ್ಧಾಂತವನ್ನು ನೀವು ಪ್ರಕಾಶಗೊಳಿಸಿರಿ" ಎಂದು ಹೇಳುತ್ತಲೇ ತಮ್ಮ ೮೦ನೇಯ ವಯಸ್ಸಿನಲ್ಲಿ ಕಣ್ಮರೆಯಾದರು. ಮುಂದೆ ಆಚಾರ್ಯರ ಆಜ್ಞೆಯಲ್ಲಿ ಅವರ ಶಿಷ್ಯರೆಲ್ಲರೂ ನಿರತರಾದರು.

ಮಧ್ವಾಚಾರ್ಯರ ಸಿದ್ಧಾಂತಕ್ಕೆ "ದ್ವೈತಮತ ಸಿದ್ಧಾಂತ"ಎಂದು ಹೆಸರು. ಇವರು ಶ್ರೀಹರಿಯೇ ಸರ್ವೋತ್ತಮನೆಂದು ಸಾರಿದರು. ಹರಿ ಭಜನೆಮಾಡಿ, ಮಾನವನು ಜನ್ಮಸಾರ್ಥಕ್ಯವನ್ನು ಹೊಂದಬೇಕೆಂದು ಉಪದೇಶಿಸಿದರು. ವಿಷ್ಣುವಿನ ನಾಮಸ್ಮರಣೆಯಿಂದ ಹೃದಯವು ಪರಿಶುದ್ಧಿಯಾಗುವುದೆಂದೂ, ಸತ್ಯವಾದ ಮತ್ತು ಹಿತವಾದ ಮಾತನ್ನು ಸರ್ವರೂ ನುಡಿಯಬೇಕೆಂದೂ ಬೋಧಿಸಿದರು ಪರಮಾತ್ಮನಾದ ಹರಿಯು ಶಾಶ್ವತವಾಗಿರುವಂತೆ, ಸತ್ಯವಾಗಿರುವಂತೆ, ಅವನಿಂದ ಸೃಷ್ಟವಾದ ಜಗತ್ತೂ ಸತ್ಯವಾಗಿರುತ್ತದೆ. ಇಂತಹ ಸತ್ಯವಾದ ಲೋಕದ ಕಲ್ಯಾಣಕ್ಕಾಗಿ ಎಲ್ಲರೂ ದುಡಿಯಿರಿ" ಎಂಬ ಅವರ ಉಪದೇಶವಾಣಿಯನ್ನು ಆವರ ಭಕ್ತಕೋಟಿಗೆ ಅನುಗ್ರಹಿಸಿದರು.

# ಶ್ರೀರಾಮಾನುಜಾಚಾರ್ಯ

ಕ್ರಿಸ್ತಪೂರ್ವ ೩೦೦೦ರಲ್ಲಿ ವಿಷ್ಣುಭಕ್ತಿ ಮಾರ್ಗವನ್ನು ತಮ್ಮ ಅನುಷ್ಠಾನದ ಮೂಲಕ ಪ್ರಚಾರಮಾಡಿದ ಹನ್ನೆರಡು ಮಂದಿ ಭಗವದ್ಭಕ್ತರಿದ್ದರು. ತಮಿಳು ನಾಡಿನ ಈ ಭಕ್ತರು 'ಆಳ್ವಾರ್' ಎಂದು ಪ್ರಸಿದ್ಧರಾಗಿದ್ದಾರೆ. ಈ ಆಳ್ವಾರು ಗಳು 'ತಿರುವಾಯ್ಮೊಳಿ' ಎಂಬ ಹೆಸರಿನ ಭಕ್ತಿರಸಪ್ರಧಾನವಾದ ಕಾವ್ಯಗಳನ್ನು ತಮಿಳಿನಲ್ಲಿ ರಚಿಸಿರುತ್ತಾರೆ. ಇವರು ವಿಷ್ಣುಭಕ್ತಿ ಪಂಥವನ್ನು ಹಿಡಿದ ಶ್ರೀವೈಷ್ಣವರು.

ಈ ಆಳ್ವಾರುಗಳ ಕಾಲದಿಂದೀಚೆಗೆ ಅನೇಕ ಆಚಾರ್ಯರು ಅವತರಿಸಿದರು. ಹಾಗೆ ಅವತರಿಸಿದವರಲ್ಲಿ ಆಚಾರ್ಯರಲ್ಲಿ ಆರನೆಯ ಶತಮಾನದಲ್ಲಿದ್ದ ನಾಥ ಮುನಿಗಳು ಮೊದಲನೆಯವರು. ಪರಮಯೋಗಿಗಳೆಂದ ಈ ಮಹಾಪುರುಷರು ಆಸೇತುಹಿಮಾಚಲಪರ್ಯಂತ ಸಂಚರಿಸಿ ವಿಷ್ಣುಭಕ್ತಿ ಮಾರ್ಗವನ್ನು ಪ್ರಚಾರಮಾಡಿದ ಶ್ರೀವೈಷ್ಣವಾಚಾರ್ಯರಲ್ಲಿ ಮೊದಲನೆಯ ಸ್ಥಾನವನ್ನು ಪಡೆದಿರುತ್ತಾರೆ. ಇವರ ಮೊಮ್ಮಕ್ಕಳಾದ ಯಾಮುನ ಮುನಿಗಳು ಅನೇಕ ಗ್ರಂಥಗಳ ನಿರ್ಮಾಣದಿಂದ ವಿಷ್ಣು ಧರ್ಮವನ್ನು ಮತ್ತಷ್ಟು ಪ್ರಕಾಶಕ್ಕೆ ತಂದರು. ಯಾಮುನ ಮುನಿಗಳ ಪೌತ್ರರಾದ ಶ್ರೀಶೈಲಪೂರ್ಣರು ಮಹಾ ಮೇಧಾವಿಗಳಾಗಿದ್ದು, ತಿರುಪತಿಯಲ್ಲಿ ನೆಲಸಿ ಶ್ರೀನಿವಾಸದೇವರ ಸೇವೆಯಲ್ಲಿ ನಿರತರಾಗಿದ್ದರು. ಈ ಮಹನೀಯರಿಗೆ ಕಾಂತಿಮತಿ ಮತ್ತು ದ್ಯುತಿಮತಿಯ ರೆಂಬ ಸಹೋದರಿಯರಿದ್ದರು. ಶ್ರೀಶೈಲಪೂರ್ಣರು ಹಿರಿಯವಳಾದ ಕಾಂತಿ ಮತಿಯನ್ನು ಶ್ರೀಪೆರಂಬದೂರಿನ ಕೇಶವ ಸೋಮಯಾಜಿಗಳಿಗೂ, ಕಿರಿಯುವ ಳಾದ ಕಾಂತಿಮತಿಯನ್ನು ಮಧುರಮಂಗಲದ ಕಮಲನಯನಭಟ್ಟರಿಗೂ ವಿವಾಹ ಮಾಡಿಕೊಟ್ಟು, ತಾವು ನಿಶ್ಚಿಂತರಾಗಿದ್ದರು.

ಶ್ರೀವೈಷ್ಣವ ಭಕ್ತಾಗ್ರಣಿಗಳಾನ ಕೇಶವಸೋಮಯಾಜಿಗಳು ಅನೇಕ ಯಾಗಾದಿಗಳನ್ನು ನಡೆಯಿಸಿದ್ದ ಮಹಾತ್ಮರು. ಇವರು ಕಾಂತಿಮತಿಯೊಡನೆ ನೆಮ್ಮದಿಯಿಂದ ಸಂಸಾರಮಾಡಿಕೊಂಡು, ಸತ್ಸಂತತಿಯ ನಿರೀಕ್ಷಣೆಯಲ್ಲಿ ಕಾಲ

ಕಳೆಯುತ್ತಿದ್ದರು. ಭಗವದಾಜ್ಞೆಯ ಪ್ರಕಾರ ಆದಿಶೇಷನು ಪ್ರತಿಯುಗದಲ್ಲೂ, ಒಂದೊಂದು ಅವತಾರವೆತ್ತಬೇಕಾಯಿತು. ಆದಿಶೇಷನು ಮೊದಲು ಜಗದಾಧಾರನಾದ ಅನಂತನಾಗಿಯೂ, ತ್ರೇತಾಯುಗದಲ್ಲಿ ಲಕ್ಷ್ಮಣನಾಗಿಯೂ, ದ್ವಾಪರ ಯುಗದಲ್ಲಿ ಬಲರಾಮನಾಗಿಯೂ, ಕಲಿಯುಗದಲ್ಲಿ ರಾಮಾನುಜನಾಗಿಯೂ ಅವತರಿಸಿದನು. ಕೇಶವ ಸೋಮಯಾಜಿಗಳ ಮಗನಾಗಿ ರಾಮಾನುಜರು ಕ್ರಿ. ಶ. ೧೦೧೭ರಲ್ಲಿ ಶ್ರೀ ಪೆರುಂಬದೂರಿನಲ್ಲಿ ಜನ್ಮವೆತ್ತಿದ್ದರು. ಇದೇ ಸಮಯದಲ್ಲಿ ಮಧುರಮಂಗಲದ ಕಮಲನಯನ ಭಟ್ಟರಿಗೆ ದ್ಯುತಿಮತಿಯಲ್ಲಿ ಗೋವಿಂದ ಭಟ್ಟನೆಂಬ ಪುತ್ರನು ಜನಿಸಿದನು. ಶ್ರೀಶೈಲಪೂರ್ಣರು ರಾಮಾನುಜರ ನಾಮಕರಣೋತ್ಸವಕ್ಕೆ ಬಂದು ಹರಿಸಿ ಹೋದರು.

ಸದಾಚಾರ ಸಂಪನ್ನರ ವಂಶದಲ್ಲಿ ಜನಿಸಿದ ರಾಮಾನುಜರಿಗೆ ಸಕಾಲದಲ್ಲಿ ಜಾತಕರ್ಮ, ಚೌಲ, ಉಪನಯನಾದಿ ಸಂಸ್ಕಾರಗಳು ಶಾಸ್ತ್ರೋಕ್ತವಾಗಿ ನೆರವೇರಿದವು. ಅವತಾರಪುರುಷರಾದ ಇವರು ಸಂಸ್ಕಾರ ಬಲದಿಂದ ತಮ್ಮ ಹದಿನಾರನೆಯ ವರುಷದವೇಳೆಗೆ ವೇದಾಭ್ಯಾಸ ಮತ್ತು ಶಾಸ್ತ್ರಾಭ್ಯಾಸಗಳನ್ನು ಮುಗಿಸಿದರು. ಆಗಿನ ಪದ್ಧತಿಯಂತೆ ಕೂಡಲೇ ರಾಮಾನುಜರಿಗೆ ವಿವಾಹವಾಯಿತು. ಆದರೆ ತತ್ವಾನ್ವೇಷಿಗಳಾದ ರಾಮಾನುಜರು ಸಂಸಾರದಲ್ಲಿ ಆಸಕ್ತರಾಗದೆ, ಕಾಂಚೀಪುರದ ಪ್ರಸಿದ್ಧ ಪಂಡಿತರಾಗಿದ್ದ ಯಾದವ ಪ್ರಕಾಶರೆಂಬುವರಲ್ಲಿ ಶಾಸ್ತ್ರಾಭ್ಯಾಸವನ್ನು ಮುಂದುವರಿಸಿದರು. ಇವರೊಡನೆ ಆಗ ಗೋವಿಂದಭಟ್ಟರೂ ವಿದ್ಯಾಭ್ಯಾಸಕ್ಕಾಗಿ ಬಂದು ಸೇರಿಕೊಂಡರು.

ರಾಮಾನುಜನರು ಯಾದವ ಪ್ರಕಾಶರಲ್ಲಿ ಶಾಸ್ತ್ರಾಭ್ಯಾಸಮಾಡುವ ಸಂದರ್ಭದಲ್ಲಿ, ಉಪನಿಷತ್ತಿನ ವಾಕ್ಯಗಳಿಗೆ ಅರ್ಥವನ್ನು ಪ್ರತಿಪಾದಿಸಬೇಕಾಗಿ ಬಂದಾಗ ಗುರುಶಿಷ್ಯರಿಗೆ ಬಹಳವಾಗಿ ವಾದ ವಿವಾದ ನಡೆಯುತ್ತಿತ್ತು. ರಾಮಾನುಜರು ಸಮೀಚೀನವಾದ ಅರ್ಥವನ್ನು ಪ್ರತಿಪಾದಿಸುತ್ತಿದ್ದರಾದ ಕಾರಣ ಗುರುಗಳು ಅನಿವಾರ್ಯವಾಗಿ ಶಿಷ್ಯನಿಂದ ಪರಾಜಯವನ್ನು ಒಪ್ಪಿಕೊಳ್ಳಬೇಕಾಗುತ್ತಿತ್ತು. ಇಂತಹ ಸಂದರ್ಭಗಳು ಅನೇಕಬಾರಿ ನಡೆದು ಯಾದವ ಪ್ರಕಾಶರಿಗೆ ರಾಮಾನುಜರ ಪ್ರತಿಭೆಯ ವಿಷಯವಾಗಿ ಈರ್ಷ್ಯಾಸೂಯೆಗಳು ತಲೆದೋರಿದವು. ತಮ್ಮ ಸಿದ್ಧಾಂತಕ್ಕೆ ರಾಮಾನುಜನು ಪ್ರಬಲ ಪ್ರತಿಬಂಧಕನಾಗಿರುವುದರಿಂದ, ಅವನನ್ನು ಏನಾದರೂ ಮಾಡಿ

ನಿರ್ಮೂಲಗೊಳಿಸಬೇಕೆಂದು ಯಾದವ ಪ್ರಕಾಶರು ತಮ್ಮ ಇತರ ಶಿಷ್ಯರೊಡನೆ ದುರಾಲೋಚನೆ ನಡೆಸಿದರು. ಅದಕ್ಕಾಗಿ ಎಲ್ಲರೂ ಗಂಗಾಯಾತ್ರೆಗೆ ಹೋಗ ಬೇಕೆಂದೂ, ಸ್ನಾನಕಾಲದಲ್ಲಿ ರಾಮಾನುಜರನ್ನು ಗಂಗಾನದಿಯಲ್ಲಿ ಮುಳುಗಿಸಿ ಏನೂ ತಿಳಿಯದವರಂತೆ ಎಲ್ಲರೂ ಹಿಂದಿರುಗಬೇಕೆಂದೂ, ನಿಶ್ಚಯಮಾಡಿ ಕೊಂಡರು.

ಈಗಿನಂತೆ ಕಾಶೀಯಾತ್ರೆಗೆ ಆಗಿನ ಕಾಲದಲ್ಲಿ ವಾಹನ ಸೌಕರ್ಯ ವಿರಲಿಲ್ಲ. ಬಂಡಿಯ ಪ್ರಯಾಣದಲ್ಲಾಗಲೀ, ನಡೆದುಕೊಂಡಾಗಲೀ ಹೋಗ ಬೇಕಾಗಿತ್ತು. ಅಂತೂ ಒಂದು ಒಳ್ಳೆಯ ದಿನದಲ್ಲಿ ಯಾದವಪ್ರಕಾಶರು ಶಿಷ್ಯ ರೊಂದಿಗೆ ಗಂಗಾಯಾತ್ರೆ ಹೊರಟರು. ರಾಮಾನುಜರ ತಮ್ಮನಾದ ಗೋವಿಂದ ನಿಗೆ ಗುರುಗಳ ಕುಟಿಲ ತಂತ್ರವು ಹೇಗೋ ಗೊತ್ತಾಯಿತು. ಮಾರ್ಗಮಧ್ಯದಲ್ಲಿ ಗೋವಿಂದನು ರಾಮಾನುಜರಿಗೆ ಈ ದ್ರೋಹಸಂಗತಿಯನ್ನು ತಿಳಿಸಲು ಸಮಯ ಕಾಯುತ್ತಿದ್ದನು ಬಹುದೂರ ಹೋದಮೇಲೆ ಗೋವಿಂದನು ರಾಮಾನುಜರನ್ನು ಹಿಂದೆ ನಿಲ್ಲಿಸಿಕೊಂಡು, ಅವರಿಗೆ ಗುರುಗಳ ಕೌಟಿಲ್ಯವನ್ನು ತಿಳಿಸಿ, ಅಲ್ಲಿಂದ ಅವರನ್ನು ಮಾತ್ರ ಹಿಂದಿರುಗುವಂತೆ ಮಾಡಿ, ತಾನು ಯಾತ್ರಾರ್ಥಿಗಳ ಗುಂಪಿನಲ್ಲಿ ಸೇರಿಕೊಂಡನು.

ಇತ್ತ ರಾಮಾನುಜರು ಕಾಡುದಾರಿಯಲ್ಲಿ ದಾರಿದಪ್ಪಿ ಅಲ್ಲಲ್ಲಿ ಸುತ್ತಾಡಿ, ಬಳಲಿ ಬೆಂಡಾಗಿ, ತಮ್ಮ ರಕ್ಷಣೆಗಾಗಿ ಕಡೆಗೆ ಕಂಚಿಯ ವರದರಾಜಸ್ವಾಮಿ ಯನ್ನು ಪ್ರಾರ್ಥಿಸಿದರು. ರಾಮಾನುಜರ ನೈಜವಾದ ಭಕ್ತಿಗೆ ಮೆಚ್ಚಿದ ಪರಮಾತ್ಮನು ಬೇಡದಂಪತಿಗಳ ರೂಪದಲ್ಲಿ ರಾಮಾನುಜರಿದ್ದ ಸ್ಥಳದಲ್ಲಿ ಕಾಣಿಸಿಕೊಂಡನು. ರಾಮಾನುಜರು ಹಠಾತ್ತನೆ ಕಂಡ ಆ ಬೇಡರ ಕುಶಲ ಪ್ರಶ್ನೆ ಮಾಡಲಾಗಿ, ಅವರೂ ಕಾಂಚೀಪುರದ ಕಡೆಗೆ ಹೋಗುವವರೆಂದು ತಿಳಿದು ಹರ್ಷಿತರಾದರು. ಕಡೆಗೆ ಮೂವರೂ ಪ್ರಯಾಣ ಮಾಡಿ, ಕತ್ತಲಾದುದರಿಂದ ಒಂದು ಕಡೆ ಮಲಗಿದರು. ಪ್ರಭಾತ ಸಮಯದಲ್ಲಿ ರಾಮಾನುಜರ ಪಕ್ಕದಲ್ಲಿ ಬೇಡರಿರಲಿಲ್ಲವಾಗಿ ಅವರಿಗೆ ಆಶ್ಚರ್ಯವಾಯಿತು. ಸ್ವಲ್ಪದೂರನಡೆದು ಹೋಗುವಷ್ಟರಲ್ಲಿಯೇ ಅವರಿಗೆ ಕಾಂಚೀಪುರದ ದೇವಸ್ಥಾನದ ಗೋಪುರದ ದೃಶ್ಯವು ಗೋಚರಿಸಿ ಅಮಿತಾನಂದವಾಯಿತು. ಅನೇಕ ಮೈಲಿಗಳ ದೂರದಲ್ಲಿದ್ದ ತಮ್ಮನ್ನು ಅಷ್ಟು ಸುಲಭವಾಗಿ ಕಂಚಿಗೆ ಕರೆತಂದಿದ್ದ ಆ ಬೇಡದಂಪತಿಗಳು ಸಾಕ್ಷಾತ್ ವರದರಾಜನಲ್ಲದೆ ಬೇರೆಯಲ್ಲ

ವೆಂದು ರಾಮಾನುಜರು ತಿಳಿದುಕೊಂಡು ತಮ್ಮೂರಿಗೆ ಸೌಖ್ಯವಾಗಿ ಬಂದು ಸೇರಿದರು.

ಇತ್ತ ಯಾದವ ಪ್ರಕಾಶರು ದಾರಿಯಲ್ಲಿ ಹೋಗುತ್ತಾ ರಾಮಾನುಜರು ತಮ್ಮಿಂದ ತಪ್ಪಿಹೋದುದಕ್ಕಾಗಿ ಪರಿತಪಿಸಿದರು. ಕಡೆಗೆ ಕಾಶಿಗೆ ಹೋಗಿ ಎಲ್ಲರೊಡನೆ ಗಂಗಾಸ್ನಾನ ಮಾಡಿದರು. ಸ್ನಾನ ಸಮಯದಲ್ಲಿ ಗೋವಿಂದ ಭಟ್ಟರ ಕೈಗೆ ಒಂದು ಶಿವಲಿಂಗವು ಸಿಕ್ಕಿತು. ಗುರುಗಳ ಸಲಹೆಯಂತೆ ಅವರು ಅದನ್ನು ಕಾಳಹಸ್ತಿಯಲ್ಲಿ ಪ್ರತಿಷ್ಠೆ ಮಾಡಿ ತಾವೂ ಅಲ್ಲಿಯೇ ನೆಲಸಿದರು. ಯಾದವಪ್ರಕಾಶರು ಕಂಚಿಗೆ ಹಿಂದಿರುಗಿದ ಮೇಲೆ ರಾಮಾನುಜರು ನಿಷ್ಕಪಟ ರಾಗಿ ಗುರುಗಳ ಬಳಿ ಮತ್ತೆ ಶಾಸ್ತ್ರಾಭ್ಯಾಸಕ್ಕೆ ಬಂದುದನ್ನು ನೋಡಿ, ನಿಶ್ಚಿಂತ ರಾಗಿದ್ದ ಅವರಿಗೆ ಮತ್ತೆ ಚಿಂತೆಗಿಟ್ಟುಕೊಂಡಿತು. ಆದರೂ ಗಂಗಾ ಯಾತ್ರೆಯು ರಾಮಾನುಜರಿಗೆ ವೃಥಾ ತಪ್ಪಿಹೋದುದಕ್ಕೆ ಅನುತಾಪವನ್ನು ಸೂಚಿಸಿ, ಮುಂದೆಯೂ ವಿದ್ಯಾಭ್ಯಾಸ ನಡೆಯಿಸಲು ಒಪ್ಪಿಕೊಂಡರು.

ಶ್ರೀವೈಷ್ಣವಾಚಾರ್ಯರಲ್ಲಿ ಪ್ರಸಿದ್ಧರಾಗಿದ್ದ ಯಾಮುನಾಚಾರ್ಯರು ಶ್ರೀರಂಗದಲ್ಲಿ ಆಚಾರ್ಯಪೀಠವನ್ನು ಅಲಂಕರಿಸಿದ್ದರು. ಇವರು ಶ್ರೀರಂಗ ನಾಥ ದೇವಾಲಯದ ಅಧಿಪತಿಗಳಾಗಿದ್ದು, ಅಲ್ಲಿಯ ಸಕಲ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದುದಲ್ಲದೆ ಅನೇಕ ಮಂದಿಗೆ ಜ್ಞಾನದಾನ ಮಾಡುತ್ತಿದ್ದರು. ತಮ್ಮ ಸಿದ್ಧಾಂತದ ಜ್ಞಾನಜ್ಯೋತಿಯನ್ನು ಮುಂದಿನವರಿಗೆ ಹರಡಬಲ್ಲ ಸಮರ್ಥ ಶಾಲಿಗಳು ಆಗಿನ ಅವರ ಶಿಷ್ಯಮಂಡಲಿಯಲ್ಲಿರಲಿಲ್ಲವಾಗಿ, ಸ್ವಾಮಿಗಳು ನಿತ್ಯವೂ ಶ್ರೀರಂಗನಾಥನಲ್ಲಿ ಅಂತಹ ಧರ್ಮವೀರನನ್ನು ಕರುಣಿಸಬೇಕೆಂದು ಪ್ರಾರ್ಥಿಸು ತ್ತಿದ್ದರು. ಹೀಗಿರಲು ಕಂಚಿಯಿಂದ ಬಂದ ಯಾತ್ರಿಕರಿಂದ ಅವರಿಗೆ ರಾಮಾನು ಜರ ವೃತ್ತಾಂತವು ತಿಳಿದು, ಅವರನ್ನು ಕಾಣಬೇಕೆಂಬ ಮನಸ್ಸುಂಟಾಗಿ ಕಂಚಿಗೆ ದಯಮಾಡಿಸಿದರು. ಯಾಮುನ ಮುನಿಗಳು ಕಂಚಿಯ ವರದ ರಾಜಸನ್ನಿಧಿಗೆ ಬಂದ ವೇಲೆ, ರಾಮಾನುಜರನ್ನು ನೋಡಿ, ಅವರ ತೇಜಸ್ಸಿಗೆ ಮುಗ್ಧರಾಗಿ ಆತನಿಂದಲೇ ತಮ್ಮ ಸಿದ್ಧಾಂತವು ಮುಂದಕ್ಕೆ ಬರಬೇಕೆಂದು ದೇವರಲ್ಲಿ ಮೊರೆಯಿಟ್ಟು, ಶ್ರೀರಂಗಕ್ಕೆ ಹಿಂದಿರುಗಿದರು.

ಕಾಂಚೀಪುರವು ಚಾಳುಕ್ಯ ದೊರೆಯಾದ ವೀರರಾಜೇಂದ್ರ ಚೋಳನ ಆಡಳಿತಕ್ಕೆ ಒಳಪಟ್ಟಿತ್ತು. ಆ ದೊರೆಯ ಮಗಳಿಗೆ ಒಮ್ಮೆ ಬ್ರಹ್ಮಪಿಶಾಚಿ ಯೊಂದು ಹಿಡಿಯಿತು. ದೊರೆಯು ಅನೇಕರಿಂದ ಮಂತ್ರ ತಂತ್ರಗಳನ್ನು

ಮಾಡಿಸಿದರೂ, ಅದು ಫಲಿಸಲಿಲ್ಲ. ಯಾದವ ಪ್ರಕಾಶರಿಗೆ ಭೂತ ಚಿಕಿತ್ಸೆಯು ತಿಳಿದಿರುವುದೆಂದು ರಾಜನಿಗೆ ಗೊತ್ತಾದಕೂಡಲೇ, ಅವರನ್ನು ಆಸ್ಥಾನಕ್ಕೆ ಬರಮಾಡಿದನು. ಯಾದವಪ್ರಕಾಶರು ಜೊತೆಯಲ್ಲಿ ರಾಮಾನುಜರನ್ನೂ ಕರೆದುಕೊಂಡು ಆಸ್ಥಾನಕ್ಕೆ ಹೋಗಿ, ಅರಸನ ಮಗಳನ್ನು ಕರೆತರಿಸಿ ಭೂತೋಚ್ಚಾಟನೆಗೆ ಕೆಲವು ಮಂತ್ರಗಳನ್ನು ಜಪಿಸಿದರು. ಆಗ ಭೂತವು ಜಗ್ಗದೆ ರಾಜನ ಮಗಳನ್ನು ಪೀಡಿಸುತ್ತಿರಲಾಗಿ ಪ್ರಕಾಶರು ಅದನ್ನು ಕುರಿತು "ಯಾವ ಮಾತಿಗೆ ರಾಜಪುತ್ರಿಯನ್ನು ಬಿಟ್ಟು ಹೊರಡುವೆ ?" ಎಂದು ಪ್ರಶ್ನಿಸಿದರು. ಆಗ ಅದು "ನಿನ್ನ ಸಂಗಡ ಬಂದಿರುವ ಮಹಾತ್ಮನು ನನ್ನ ತಲೆಯ ಮೇಲೆ ಕಾಲಿಟ್ಟು ಹೊರಡು ಎಂದರೆ ಹೋಗುವೆನು" ಎಂದು ಹೇಳಿತು. ಗುರುಗಳ ಆಜ್ಞೆಯಂತೆ ರಾಮಾನುಜರು ಬ್ರಹ್ಮಪಿಶಾಚಿಯ ಮೇಲೆ ಕಾಲಿಟ್ಟು ಭೂತವನ್ನು ಹೊರಟುಹೋಗುವಂತೆ ಹೇಳಿದ ಕೂಡಲೇ, ಆದು ರಾಜಪುತ್ರಿಯನ್ನು ಬಿಟ್ಟು ಹೋಯಿತು. ಅದರ ಗುರುತಿಗಾಗಿ ಒಂದು ಅಶ್ವತ್ಥವೃಕ್ಷದ ಕೊಂಬೆಯನ್ನು ಮುರಿದು ಹೊರಟಿತು. ರಾಜನು ಯಾದವಪ್ರಕಾಶರಿಗೂ ಮತ್ತು ರಾಮಾನುಜರಿಗೂ ಮರ್ಯಾದೆಮಾಡಿ ಕಳುಹಿಸಿಕೊಟ್ಟನು. ಹೀಗೆ ತಮ್ಮ ಶಿಷ್ಯನ ದೆಸೆಯಿಂದ ತಮ್ಮ ಗೌರವವು ಉಳಿದುದಕ್ಕಾಗಿ ಅವರನ್ನು ಬಹುವಾಗಿ ಮೆಚ್ಚಿಕೊಂಡರು.

ಆದರೆ ಗುರುಶಿಷ್ಯರ ಪ್ರೀತಿ ಬಹಳಕಾಲ ನಿಲ್ಲಲಿಲ್ಲ. ಒಂದು ದಿನ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ವಾಕ್ಯಾರ್ಥದಲ್ಲಿ ಗುರುಶಿಷ್ಯರಲ್ಲಿ ವಿವಾದವುಂಟಾಯಿತು. ಇದರಿಂದ ಕೋಪಗೊಂಡ ಯಾದವಪ್ರಕಾಶರು ರಾಮಾನುಜರಿಗೆ ಇನ್ನು ಮೇಲೆ ಅವರು ಬೇರೆ ಗುರುಗಳಲ್ಲಿ ವಿದ್ಯಾಭ್ಯಾಸ ಮುಂದುವರಿಸಬೇಕೆಂದು ಹೇಳಿಬಿಟ್ಟರು. ಅಂದಿನಿಂದ ಯಾದವರಲ್ಲಿ ರಾಮಾನುಜರ ವಿದ್ಯಾಭ್ಯಾಸವು ಮುಕ್ತಾಯವಾಯಿತು. ಹಿಂದಿನಂತೆ ಅವರು ವರದರಾಜ ದೇವರ ಅಭಿಷೇಕಾದಿಗಳಿಗೆ ಸರಸ್ಸಿನಿಂದ ತೀರ್ಥವನ್ನು ಕೊಡಗಳಲ್ಲಿ ತಂದುಕೊಡುವ ಸೇವೆಯಲ್ಲಿ ಆಸಕ್ತರಾಗಿ, ಕಂಚಿಯಲ್ಲಿ ಕಾಲಕಳೆಯುತ್ತಿದ್ದರು.

ಇತ್ತ ಶ್ರೀರಂಗದಲ್ಲಿ ಯಾಮುನ ಮುನಿಗಳಿಗೆ ವಯಸ್ಸಾಗುತ್ತಾ ಬಂತು. ತಮ್ಮನಂತರ ಆಚಾರ್ಯ ಪೀಠಕ್ಕೆ ರಾಮಾನುಜರನ್ನು ಕರೆತಂದು ಕುಳ್ಳಿರಿಸಬೇಕೆಂಬ ಇಚ್ಛೆಯು ಅವರಿಗಿತ್ತು. ಕೂಡಲೇ ಮಹಾಪೂರ್ಣರೆಂಬ ತಮ್ಮ ಶಿಷ್ಯರನ್ನು ಕರೆದು ರಾಮಾನುಜರನ್ನು ತಮ್ಮಲ್ಲಿಗೆ ಕರೆತರುವಂತೆ ಕಂಚಿಗೆ

ಕಳುಹಿಸಿದರು. ಎಂದಿನಂತೆ ರಾಮಾನುಜರು ಆಗ ತೀರ್ಥವನ್ನು ತರುತ್ತಿದ್ದಾಗ, ದಾರಿಯಲ್ಲಿ ಮಹಾಪೂರ್ಣರು ಯಾಮುನ ಮುನಿಗಳಿಂದ ರಚಿತವಾದ ಗೀತೆಗಳನ್ನು ಹಾಡುತ್ತಾ ನಿಂತಿದ್ದರು. ಈ ಶ್ಲೋಕಗಳನ್ನು ಕೇಳಿದೊಡನೆಯೇ ಅವುಗಳ ಲಾಲಿತ್ಯಕ್ಕೂ, ಅರ್ಥಗಾಂಭೀರ್ಯತೆಗಳಿಗೂ ಮನಸೋತು ಅವುಗಳನ್ನು ರಚಿಸಿದ ಮಹಾತ್ಮರು ಯಾರೆಂದು ಮಹಾಪೂರ್ಣರನ್ನು ಪ್ರಶ್ನಿಸಿದರು. ಅದಕ್ಕೆ ಮಹಾಪೂರ್ಣರು ಆ ಮಹಾತ್ಮರು ಶ್ರೀರಂಗದಲ್ಲಿರುವರೆಂದೂ, ಅವರ ಸಂಗಡ ಬಂದಲ್ಲಿ ಸ್ವಾಮಿಗಳ ಸಂದರ್ಶನ ಮಾಡಿಸುವುದಾಗಿಯೂ ತಿಳಿಸಿದರು. ಕೂಡಲೇ ರಾಮಾನುಜರು ತೀರ್ಥವನ್ನು ದೇವಾಲಯಕ್ಕೆ ಕೊಟ್ಟು ತಾಯಿಯ ಅಪ್ಪಣೆ ಪಡೆದು ಪೂರ್ಣರೊಡನೆ ಶ್ರೀರಂಗಾಭಿಮುಖವಾಗಿ ಹೊರಟರು.

ಮನುಷ್ಯ ಚಿಂತಿಸುವುದೊಂದಾದರೆ ದೈವ ಚಿಂತಿಸುವುದೇ ಬೇರೊಂದು. ರಾಮಾನುಜರು ಯಾಮುನ ಮುನಿಗಳೊಡನೆ ಸಂಭಾಷಿಸಕೂಡದೆಂದೇ ದೈವ ಸಂಕಲ್ಪವಾಗಿದ್ದಿರಬಹುದು. ಇಬ್ಬರೂ ಶ್ರೀರಂಗದ ಹತ್ತಿರ ಹರಿಯುವ ಕಾವೇರಿಯ ಬಳಿಗೆ ಬರುವ ವೇಳೆಗೆ, ಯಾಮುನ ಮುನಿಗಳು ದೈವಾಧೀನರಾಗಿದ್ದುದರಿಂದ, ಶಿಷ್ಯರು ಅವರ ಸಮಾಧಿ ಮಾಡುವುದರಲ್ಲಿದ್ದರು. ಆಗ ರಾಮಾನುಜರು ವಿಭೂತಿಪುರುಷರ ಕಳೇಬರಕ್ಕೇ ನಮಸ್ಕರಿಸಿ, ಬಹಳವಾಗಿ ವ್ಯಥೆಪಟ್ಟರು. ಹಾಗೆ ಕಳೇಬರವನ್ನು ನೋಡುತ್ತಿದ್ದಾಗ ಬಲಗೈಯ ಮೂರು ಬೆರಳುಗಳು ಮಡಿಸಿದ್ದುದು ರಾಮಾನುಜರಿಗೆ ಗೋಚರವಾಯಿತು. ಆಗ ನೆರೆದಿದ್ದ ಶಿಷ್ಯರನ್ನು ಕುರಿತು "ಗುರುಗಳ ಯಾವುದಾದರೂ ಸಂಕಲ್ಪವು ಈಡೇರದೆ ನಿಂತುಹೋಗಿರುವುದೇ?" ಎಂದು ಕೇಳಿದರು. ಆಚಾರ್ಯರ ವಿಚಾರವನ್ನು ಅರಿತಿದ್ದ ಕೆಲವು ಶಿಷ್ಯರು ಅವರ ಮೂರು ಸಂಕಲ್ಪಗಳು ಕೈಗೂಡಲಿಲ್ಲವೆಂದು ತಿಳಿಸಿದರು. ಆಗ ರಾಮಾನುಜರು ಆಚಾರ್ಯರ ಪಾದಗಳನ್ನು ಮುಟ್ಟಿ ಅವರ ಅಭೀಷ್ಟವನ್ನು ನೆರವೇರಿಸುವುದಾಗಿ ಹೇಳಿದಕೂಡಲೇ, ಮಡಿಸಿದ್ದ ಬೆರಳುಗಳು ನೆಟ್ಟಗಾದವು. ಅಲ್ಲಿ ನೆರೆದವರೆಲ್ಲರೂ ಇಂತಹ ಅದ್ಭುತವನ್ನು ನೋಡಿ, ರಾಮಾನುಜರೇ ಆ ಪೀಠವನ್ನು ಮುಂದೆ ಅಲಂಕರಿಸಬೇಕೆಂದು ಪ್ರಾರ್ಥಿಸಿದರು. ಆಗ ರಾಮಾನುಜರಿಗೆ ವಿಪರೀತ ವ್ಯಥೆಯಾಗಿದ್ದುದರಿಂದ ಕಾವೇರೀಸ್ನಾನಮಾಡಿ ಕಂಚಿಗೆ ಬಂದುಬಿಟ್ಟರು.

ಬ್ರಹ್ಮಸೂತ್ರಕ್ಕೆ ಭಾಷ್ಯಬರೆಯುವುದೂ, ವಿಷ್ಣುಪುರಾಣ ರಚಿಸಿದ ಪರಾಶರ ಮಹರ್ಷಿಯ ಹೆಸರನ್ನು ಒಬ್ಬನಿಗಿಡುವುದೂ, ಯೋಗ್ಯವ್ಯಕ್ತಿಯೊಬ್ಬ

ನಿಂದ ಶಟಗೋಪರ ಗ್ರಂಥಕ್ಕೆ ವ್ಯಾಖ್ಯಾನ ಬರೆಯಿಸುವುದೂ ಯಾಮುನಾ ಚಾರ್ಯರ ಮೂರು ಸಂಕಲ್ಪಗಳಾಗಿದ್ದವು. ಕಾಲಕ್ರಮದಲ್ಲಿ ರಾಮಾನುಜರು ಆಚಾರ್ಯರ ಮೂರು ಇಷ್ಟಗಳನ್ನೂ ನೆರವೇರಿಸಿದರು.

ಕಂಚಿಯಲ್ಲಿ ಕಾಂಚೀಪೂರ್ಣರೆಂಬ ಭಕ್ತಾಗ್ರಣಿಗಳಿದ್ದರು. ಅವರು ವರದರಾಜಸ್ವಾಮಿಯೊಂದಿಗೆ ಮಾತನಾಡುತ್ತಿದ್ದರೆಂಬ ಹೇಳಿಕೆಯಿದ್ದಿತು. ಕಾಂಚೀಪೂರ್ಣರನ್ನು ಕಂಡರೆ ರಾಮಾನುಜರಿಗೆ ಬಹಳ ಗೌರವ, ಒಂದು ದಿನ ರಾಮಾನುಜರು ಕಾಂಚೀಪೂರ್ಣರನ್ನು ತಮ್ಮ ಮನೆಗೆ ಊಟಕ್ಕೆ ಕರೆಯಲು, ಅವರೂ ಬರಲು ಒಪ್ಪಿದರು. ಮಾರನೆಯ ದಿನ ರಾಮಾನುಜರು ಅವರನ್ನು ಕರೆದುಕೊಂಡು ಬರಲು ಹೋದರು. ಆದರೆ ಬೇರೊಂದು ದಾರಿಯಲ್ಲಿ ಪೂರ್ಣರು ಅವರ ಮನೆಗೆ ಬಂದು, ಊಟಮಾಡಿ ಹೊರಟು ಹೋಗಿದ್ದರು ರಾಮಾನುಜರು ಮನೆಗೆ ಬಂದಾಗ ಅವರ ಪತ್ನಿಯು ಮತ್ತೆ ಸ್ನಾನಮಾಡಿದ್ದನ್ನು ಕಂಡು ಅದರ ಕಾರಣವನ್ನು ಕೇಳಿದರು. ಅದಕ್ಕೆ ಆಕೆಯು ಮತಾಂತರಸ್ಥನು ಭೋಜನ ಮಾಡಿದ ಸ್ಥಳವನ್ನು ಸಾರಿಸಿದ್ದರಿಂದ ನಾನು ಮತ್ತೆ ಮಡಿಯುಟ್ಟು ದ್ದಾಗಿ ತಿಳಿಸಿದಳು. ಭಕ್ತಾಗ್ರೇಸರರ ವಿಚಾರದಲ್ಲಿ ಅವರಿಗೆ ಹೆಂಡತಿಯ ಆ ವಿಧ ವಾದ ನಡವಳಿಕೆಯು ಸಹಿಸದೆ ಬಹು ದುಃಖವಾಯಿತು.

ಪರಮ ಭಾಗವತರಾದ ಕಾಂಚೀಪೂರ್ಣರನ್ನು ರಾಮಾನುಜರು ಗುರು ವಾಗಿ ಅಂಗೀಕರಿಸಿ, ಅನೇಕ ಸಂದೇಹಗಳನ್ನು ನಿವೃತ್ತಿ ಮಾಡಿಕೊಂಡರು. ಕಾಂಚೀಪೂರ್ಣರು ಶ್ರೀ ವರದರಾಜ ದೇವರ ಬಳಿ ಧ್ಯಾನಮಗ್ನರಾಗಿ ಕುಳಿತು, ರಾಮಾನುಜರು ಕೇಳಿದ ಆಧ್ಯಾತ್ಮ ವಿಚಾರಗಳಿಗೆ ಉತ್ತರ ಹೇಳಲಾಗಿ, ಅವರಿಗೆ ಬಹಳ ಆನಂದವಾಯಿತು. ಕಾಂಚೀಪೂರ್ಣರ ಆಜ್ಞೆಯಂತೆ ರಾಮಾನುಜರು ಶ್ರೀರಂಗದಲ್ಲಿದ್ದ ಮಹಾಪೂರ್ಣರಲ್ಲಿ ಹೆಚ್ಚಿನ ಸಂಗತಿಗಳನ್ನು ತಿಳಿದುಕೊಳ್ಳಲು ಹೊರಟರು.

ಇತ್ತ ಶ್ರೀರಂಗದಲ್ಲಿ ಯಾಮುನ ಮುನಿಗಳ ಪೀಠಕ್ಕೆ ರಾಮಾನುಜರನ್ನು ಕರೆತರಬೇಕೆಂದು ನಿಶ್ಚಯಿಸಿ, ಎಲ್ಲರೂ ಸೇರಿ ಅದಕ್ಕಾಗಿ ಮಹಾಪೂರ್ಣರನ್ನು ಕಳುಹಿಸಿದರು. ಮಹಾಪೂರ್ಣರು ಪತ್ನೀ ಸಮೇತರಾಗಿ ಕಂಚಿಯ ಕಡೆಗೆ ಪ್ರಯಾಣ ಮಾಡುತ್ತಾ, ಮಧ್ಯಸ್ಥಳವಾಗಿದ್ದ ಮಧುರಾಂತಕಂ ಎಂಬೂರಿನಲ್ಲಿ ತಂಗಿದರು. ಇತ್ತ ರಾಮಾನುಜರೂ ಸಹಾ ಶ್ರೀರಂಗಾಭಿಮುಖವಾಗಿ ಹೊರಟು ಅದೇ ಊರಿಗೆ ಬಂದಿದ್ದರು. ಇಬ್ಬರೂ ಅಲ್ಲಿಯೇ ಸಂಧಿಸಿದಾಗ ಪರಸ್ಪರ

ಸಂತೋಷಕ್ಕೆ ಪಾರವಿಲ್ಲದಂತಾಯಿತು. ರಾಮಾನುಜರ ಕೋರಿಕೆಯಂತೆ ಮಹಾಪೂರ್ಣರು ತಮಗೆ ಯಾಮುನ ಮುನಿಗಳಿಂದ ಉಪದೇಶವಾಗಿದ್ದ ಮಂತ್ರಾರ್ಥಗಳನ್ನು ಅವರಿಗೂ ಉಪದೇಶಿಸಿದರು. ಕಡೆಗೆ ರಾಮಾನುಜರು ಗುರುಗಳನ್ನು ಕಂಚಿಗೆ ಬರಮಾಡಿಕೊಂಡು, ತಾವು ವಾಸಿಸುತ್ತಿದ್ದ ಮನೆಯ ಒಂದು ಭಾಗದಲ್ಲಿಯೇ ಅವರ ವಾಸಕ್ಕೆ ಅನುಕೂಲ ಕಲ್ಪಿಸಿ, ಅವರಲ್ಲಿ ಶಾಸ್ತ್ರಾಭ್ಯಾಸವನ್ನು ಮುಂದುವರಿಸಿದರು.

ಹೀಗಿರಲು, ಒಂದು ದಿನ ಮಹಾಪೂರ್ಣರ ಭಾರ್ಯೆಯು ಬಿಂದಿಗೆಯಲ್ಲಿ ನೀರು ತರುತ್ತಿದ್ದಾಗ ರಾಮಾನುಜರ ಭಾರ್ಯೆಯ ಕೊಡಕ್ಕೆ ಸ್ವಲ್ಪ ನೀರು ಹಾರಿತು. ಆಚಾರ ವಿಷಯವಾಗಿ ಅವರಿಬ್ಬರಿಗೂ ವಾಗ್ವಾದ ನಡೆದುದರಿಂದ, ಮಹಾಪೂರ್ಣರಿಗೆ ಅಸಮಾಧಾನವಾಗಿ ರಾಮಾನುಜರಿಗೆ ಯಾವ ವಿಷಯವೂ ತಿಳಿಯದಿರುವಾಗಲೇ ಶ್ರೀರಂಗಕ್ಕೆ ಹೊರಟುಹೋದರು. ರಾಮಾನುಜರು ಮನೆಗೆ ಬಂದ ಕೂಡಲೇ, ಆಚಾರ್ಯರನ್ನು ಕಾಣದೆ, ಅಷ್ಟು ಅನಾಹುತಗಳಿಗೂ ತಮ್ಮ ಪತ್ನಿಯು ಕಾರಣಳೆಂದು ನಿಶ್ಚಯಿಸಿ, ಆಕೆಯನ್ನು ಕೂಡಲೇ ತೌರೂರಿಗೆ ಕಳುಹಿಸಿಬಿಟ್ಟರು. ಅಂದು ಮೊದಲು ಪುನಃ ಆಕೆಯನ್ನು ಜ್ಞಾಪಿಸಿಕೊಳ್ಳದೆ, ಸಂಸಾರದ ಚಿಂತೆಯನ್ನು ಸಂಪೂರ್ಣ ತ್ಯಜಿಸಿದರು. ಈ ಪ್ರಕರಣದಿಂದ ರಾಮಾನುಜರ ಗೃಹಸ್ಥ ಜೀವನವು ಅವರ ಮೂವತ್ತೆರಡನೆಯ ವರ್ಷದಲ್ಲಿಯೇ ಕೊನೆಗೊಂಡಿತು. ಕೂಡಲೇ ರಾಮಾನುಜರು ವರದರಾಜ ಸ್ವಾಮಿಯ ಮಂದಿರಕ್ಕೆ ಹೋಗಿ, ಅಲ್ಲಿಯೇ ಸಂನ್ಯಾಸವನ್ನು ಪರಿಗ್ರಹಿಸಿದರು. ಅಂದಿನಿಂದ 'ಯತಿರಾಜ' ಎಂಬ ಹೆಸರಿನಿಂದ ಪ್ರಸಿದ್ಧರಾದರು.

ಯತಿರಾಜರ ಪ್ರಸಿದ್ಧಿಯನ್ನು ಕೇಳಿ ಅನೇಕರು ಅವರ ಶಿಷ್ಯರಾದರು. ಅವರ ಪೈಕಿ ಕೂರೇಶ ಮತ್ತು ದಾಶರಥಿ ಎಂಬಿಬ್ಬರು ಗುರುಗಳ ಮುಖ್ಯ ಶಿಷ್ಯರಾದರು. ರಾಮಾನುಜರ ಗುರುವಾಗಿದ್ದ ಯಾದವ ಪ್ರಕಾಶರಿಗೆ ಸ್ವಪ್ನದಲ್ಲಿ ಪ್ರೇರಣೆಯಾಗಿ ರಾಮಾನುಜರ ಬಳಿ ಬಂದು ತಮ್ಮನ್ನು ಕ್ಷಮಿಸುವಂತೆ ಕೇಳಿಕೊಂಡುದಲ್ಲವೆ, ಅವರ ಶಿಷ್ಯರನ್ನಾಗಿ ಪರಿಗ್ರಹಿಸಬೇಕೆಂದು ಬೇಡಿದರು. ವಿಶಾಲ ಹೃದಯರಾದ ಯತಿರಾಜರು ಅವರಿಗೆ ಸಂಸ್ಕಾರಗಳನ್ನು ಮಾಡಿ 'ಗೋವಿಂದಜೀಯರ್' ಎಂಬ ಹೆಸರನ್ನಿಟ್ಟು, ಅವರಿಂದ ಯತಿಧರ್ಮವೆಂಬ ಗ್ರಂಥವನ್ನು ಬರೆಯಿಸಿದರು.

ರಾಮಾನುಜರು ಸಂನ್ಯಾಸ ಸ್ವೀಕಾರ ಮಾಡಿದ ಸಂಗತಿಯು ಶ್ರೀರಂಗದ

ಜನಗಳಿಗೆ ತಿಳಿದುಬರಲಾಗಿ, ಅವರು ಕೂಡಲೇ ಯತಿರಾಜರನ್ನು ತಮ್ಮೂರಿಗೆ ದಯಮಾಡಿಸಬೇಕೆಂದು ಪ್ರಾರ್ಥಿಸಿದರು. ಅದರಂತೆ ಗುರುಗಳು ಶ್ರೀರಂಗಕ್ಕೆ ಬಂದು ಯಾಮುನ ಮುನಿಗಳ ಇಷ್ಟದಂತೆ, ಅವರು ಬಿಟ್ಟಿದ್ದ ಪೀಠವನ್ನು ಅಲಂಕರಿಸಿದರು. ಸ್ವಾಮಿಗಳು ಅಲ್ಲಿ ಶ್ರೀರಂಗನಾಥ ದೇವರ ಸೇವೆ ಯಲ್ಲಿಯೂ, ಶಿಷ್ಯಮಂಡಲಿಗೆ ಉಪದೇಶ ಮಾಡುವುದರಲ್ಲಿಯೂ ನಿರತ ರಾದರು.

ರಾಮಾನುಜರು ಶ್ರೀರಂಗದಲ್ಲಿ ನಿಂತಮೇಲೆ ಪೆರಿಯನಂಬಿಯೆಂಬ ಗುರು ಗಳನ್ನಾಶ್ರಯಿಸಿ, ಅವರಿಂದ ಅನೇಕ ಉಪದೇಶಗಳನ್ನು ಪಡೆದರು. ಅಲ್ಲಿದ್ದ ಮಹಾಪೂರ್ಣರಲ್ಲಿ ಕಂಚಿಯಲ್ಲಿ ನಡೆದ ಅಪಚಾರದ ದುಃಖವನ್ನು ತೋಡಿ ಕೊಂಡರಲ್ಲದೆ ಅವರ ಸಲಹೆಯ ಪ್ರಕಾರ ಗೋಷ್ಠೀಪೂರ್ಣರೆಂಬ ಗುರುಗಳಿಂದ ಉಪದೇಶ ಪಡೆಯಲು ಗೋಷ್ಠೀಪುರಕ್ಕೆ ಹೋದರು. ಆಗಿನ ಕಾಲದಲ್ಲಿ ಶಿಷ್ಯರನ್ನು ಗುರುಗಳು ಹಲವು ಬಾರಿ ಪರೀಕ್ಷೆಮಾಡಿ ಅವರು ಅರ್ಹ ರಾಗಿದ್ದರೆ ಮಾತ್ರ ಅವರಿಗೆ ಉಪದೇಶವೀಯುತ್ತಿದ್ದರು. ಅದರಂತೆ ಗೋಷ್ಠೀ ಪೂರ್ಣರು ರಾಮಾನುಜರನ್ನೂ ಕೂಡ ಹದಿನೇಳು ಬಾರಿ ಸುತ್ತಿಸಿ, ಕಡೆಗೆ ತಾವು ಹೇಳುವ ರಹಸ್ಯವನ್ನು ಮತ್ತಾರಿಗೂ ತಿಳಿಸಕೂಡದೆಂದು ವಿಧಿಸಿ, ಮಂತ್ರೋಪದೇಶವಿತ್ತರು. ರಾಮಾನುಜರಿಗೆ ತಾವೊಬ್ಬರೆ ಭವಸಾಗರದಿಂದ ಬಿಡುಗಡೆ ಹೊಂದಿ ಮುಕ್ತಿಯನ್ನು ಪಡೆಯಬಲ್ಲ ಮಂತ್ರವನ್ನು ತಿಳಿದು ಕೃತಾ ರ್ಥರಾಗಿ ಬಿಡುವ ಸ್ವಾರ್ಥ ಹಿಡಿಸಲಿಲ್ಲ. ಅದಕ್ಕಾಗಿ ಮಾರನೆಯ ದಿನ ಗೋಷ್ಠೀಪುರದ ಶ್ರೀನೃಸಿಂಹಸ್ವಾಮಿ ದೇವಸ್ಥಾನದ ಎತ್ತರವಾದ ಭಾಗದಲ್ಲಿ ನಿಂತು, ಅಲ್ಲಿ ನೆರೆದ ಬಹುಮಂದಿಗೆ ಮಂತ್ರೋಪದೇಶವನ್ನು ಬಹಿರಂಗ ಪಡಿಸಿದರು. ಈ ವಿಷಯವು ಗೊತ್ತಾದ ಮೇಲೆ ಮೊದಲು ಗೋಷ್ಠೀ ಪೂರ್ಣರಿಗೆ ಕೋಪ ಬಂದರೂ, ಶಿಷ್ಯನ ವಿಶಾಲ ಹೃದಯಕ್ಕೆ ಮೆಚ್ಚಿ ಅವರನ್ನು ಆಶೀರ್ವದಿಸಿ ಕಳುಹಿಸಿದರು. ಅಲ್ಲಿಂದ ಮುಂದೆ ಯಾಮುನಾಚಾರ್ಯರ ಶಿಷ್ಯ ರಾಗಿದ್ದ ಮಾಲಾಧರರೆಂಬುವರಲ್ಲಿ ದಿವ್ಯ ಪ್ರಬಂಧಗಳೆಂದು ರೂಢಿಯಲ್ಲಿರುವ ತಮಿಳು ಗೀತೆಗಳನ್ನೆಲ್ಲಾ ಅಭ್ಯಾಸ ಮಾಡಿದರು. ಇಲ್ಲಿಗೆ ರಾಮಾನುಜರು ಶ್ರೀವೈಷ್ಣವ ತತ್ವಗ್ರಂಥಗಳನ್ನೆಲ್ಲಾ ಓದಿ ಮುಗಿಸಿ, ಮುಂದೆ ಪ್ರಚಾರ ಕಾರ್ಯವನ್ನು ಕೈಗೊಂಡರು. ಈ ವೇಳೆಗೆ ಗುರುಗಳ ಶಿಷ್ಯಮಂಡಲಿಯೂ ಹೆಚ್ಚಿತು.

ಯತಿರಾಜರು ನಿತ್ಯವೂ ವೇದಾಂತ ಪಾಠದ ತರಗತಿಗಳನ್ನು ನಡೆಸುತ್ತಿದ್ದರು. ಹಿಂದೆ ಪ್ರತಿಜ್ಞೆ ಮಾಡಿದಂತೆ ಇವರು ಬ್ರಹ್ಮ ಸೂತ್ರಕ್ಕೆ ಶ್ರೀಭಾಷ್ಯ ಬರೆಯಬೇಕಾಗಿತ್ತು. ಈ ಕಾರ್ಯಕ್ಕೆ ಶಿಷ್ಯನಾದ ಕೂರೇಶರ ಸಹಾಯವನ್ನು ತೆಗೆದುಕೊಂಡರು. ರಾಮಾನುಜರು ಹೇಳುತ್ತಿದ್ದುದನ್ನು ಕೂರೇಶರು ಬರೆಯುತ್ತಿದ್ದರು. ಆದರೆ ಕುಶಾಗ್ರ ಬುದ್ಧಿಗಳಾದ ಕೂರೇಶರು ವಿರೋಧಾಭಿಪ್ರಾಯಗಳು ಬಂದ ಕಡೆ ಲೇಖನಿಯನ್ನು ಕೆಳಗಿಡುತ್ತಿದ್ದರು. ಆಗ ಗುರುಗಳು ಮತ್ತೆ ವಿಮರ್ಶಿಸಿ ಸಮೀಚೀನವಾದ ಅರ್ಥವನ್ನು ಹೇಳಿದ ಮೇಲೆ ಮುಂದುವರಿಸಿ ಬರೆಯುತ್ತಿದ್ದರು. ಕಡೆಗೆ ಶ್ರೀಭಾಷ್ಯವೆಂಬೀ ಮಹಾಗ್ರಂಥವನ್ನು ಪೂರ್ತಿ ಮಾಡಿದ ಮೇಲೆ, ವೇದಾಂತಸಾರ, ವೇದಾಂತದೀಪ, ಗೀತಾಭಾಷ್ಯ ಮುಂತಾದ ಗ್ರಂಥಗಳನ್ನು ರಾಮಾನುಜರು ರಚಿಸಿದರು.

ಬಳಿಕ ರಾಮಾನುಜರು ತಾವು ಬರೆದ ಗ್ರಂಥಗಳ ಪ್ರಚಾರಕ್ಕಾಗಿಯೂ, ಪಂಡಿತರೊಂದಿಗೆ ಚರ್ಚಿಸುವುದಕ್ಕಾಗಿಯೂ, ಪುಣ್ಯಕ್ಷೇತ್ರಗಳ ಸಂದರ್ಶನಕ್ಕಾಗಿಯೂ ದೇಶಪರ್ಯಾಟನೆಯನ್ನು ಕೈಗೊಂಡರು. ಅವರು ಶ್ರೀರಂಗದಿಂದ ಹೊರಟು ಕುಂಭಕೋಣದ ಮಾರ್ಗವಾಗಿ ಸೇತುವಿಗೆ ಹೋಗಿ ಅಲ್ಲಿ ನಮ್ಮಾಳ್ವರರ ಜನ್ಮ ಭೂಮಿಯಾದ ತಿರುನಗರಿಗೆ ಬಂದರು. ಅಲ್ಲಿಂದ ಅವರು ಮುಂದೆ ಮಲೆಯಾಳಕ್ಕೆ ಹೊರಟರು. ದಾರಿಯುದ್ದಕ್ಕೂ, ಜನಗಳಿಗೆ ತಿಳುವಳಿಕೆಯನ್ನು ಕೊಡುತ್ತಾ, ತಮ್ಮನ್ನು ಪ್ರತಿಭಟಿಸುತ್ತಿದ್ದ ಪಂಡಿತರನ್ನು ತರ್ಕದಿಂದ ಜಯಿಸಿ, ಅವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಅಲ್ಲಿಂದ ಮಥುರಾ, ಬೃಂದಾವನ, ಗೋವರ್ಧನಗಳೇ ಮೊದಲಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಾ ಉತ್ತರದ ಕಡೆಗೆ ಹೊರಟು ಕಾಶ್ಮೀರಕ್ಕೆ ಬಂದರು.

ಕಾಶ್ಮೀರದಲ್ಲಿ ಒಂದು ಸರಸ್ವತೀ ಪೀಠವೂ ಮತ್ತು ದೊಡ್ಡ ಸರಸ್ವತಿಯ ಪ್ರತಿಮೆಯೂ ಇತ್ತು. ಅಲ್ಲಿಗೆ ಬರುತ್ತಿದ್ದ ಪಂಡಿತರು ತಾವು ಬರೆದ ಗ್ರಂಥ ಪರೀಕ್ಷೆಗಾಗಿ, ಆ ಸರಸ್ವತಿಯ ಹಸ್ತದಲ್ಲಿ ತಮ್ಮ ಗ್ರಂಥವನ್ನಿಡುವ ವಾಡಿಕೆಯಿತ್ತು. ಅದು ಉತ್ತಮವಾದ ಗ್ರಂಥವಾಗಿದ್ದಲ್ಲಿ ಮಾತ್ರ ದೇವಿಯ ಕೈಯಿಂದ ಅಂಗೀಕೃತವಾಗಿ ಶ್ಲಾಘಿಸಲ್ಪಡುತ್ತಿತ್ತು. ಅದೇ ಮೇರೆಗೆ ಯತಿರಾಜರು, ತಾವು ರಚಿಸಿದ ಶ್ರೀಭಾಷ್ಯವನ್ನು ಸರಸ್ವತಿಯ ಕೈಯಲ್ಲಿಟ್ಟಾಗ ಆಕೆಯು ಪ್ರತ್ಯಕ್ಷಳಾಗಿ ಗ್ರಂಥವನ್ನು ಶ್ಲಾಘಿಸಿ, ಇನ್ನು ಮುಂದೆ ಅವರಿಗೆ ಶ್ರೀಭಾಷ್ಯಕಾರರೆಂದು ಹೆಸರಾಗಲಿ ಎಂದು ಹರಸಿದಳಲ್ಲದೆ, ತನ್ನ ಆರಾಧ್ಯ ದೇವತೆಯಾದ ಹಯಗ್ರೀವ

ಮೂರ್ತಿಯನ್ನು ಯತಿರಾಜರಿಗೆ ಕೊಟ್ಟು ಕಳುಹಿಸಿದುದಾಗಿ ಪ್ರತೀತಿಯಿದೆ. ಕಾಶ್ಮೀರದ ಮಹಾರಾಜರು ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮೆಚ್ಚಿಗೆಯಿತ್ತರು. ಆ ರಾಜರು ಈ ತತ್ವಗಳ ಆಧಾರವಾದ ಗ್ರಂಥವನ್ನು ತಮ್ಮ ಭಂಡಾರದಿಂದ ತೆಗೆದು ತೋರಿಸಲು, ಸ್ವಾಮಿಗಳೂ ಮತ್ತು ಕೂರೇಶರೂ ಹರ್ಷಿತರಾದರು.

ಶ್ರೀಭಾಷ್ಯಕಾರರು ಕಾಶ್ಮೀರದಿಂದ ಕಾಶಿಗೆ ಬಂದು ಪವಿತ್ರವಾದ ಗಂಗಾ ಸ್ನಾನಮಾಡಿ, ದಕ್ಷಿಣಾಭಿಮುಖವಾಗಿ ಜಗನ್ನಾಥಕ್ಕೆ ಬಂದರು. ಅಲ್ಲಿ ಜಗನ್ನಾಥ ದೇವರ ದರ್ಶನಮಾಡಿಕೊಂಡು, ಅಹೋಬಲ, ತಿರುಪತಿ ಮೊದಲಾದ ದಿವ್ಯ ಕ್ಷೇತ್ರಯಾತ್ರೆಗೈದು, ಶ್ರೀರಂಗವನ್ನು ಸೇರಿದರು.

ಹಿಂದೆ ಶ್ರೀರಂಗವು ಚೋಳರಾಜರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿಮಿ ಕಂಟಕನೆಂಬ ಚೋಳರಾಜನು ಶೈವನಾಗಿದ್ದನು. ಅವನಿಗೆ ವಿಷ್ಣುವಿನ ಹೆಸರೆತ್ತಿದರೆ ಆಗುತ್ತಿರಲಿಲ್ಲ. "ಶಿವನಿಗಿಂತ ಬೇರೆ ದೇವರು ಮತ್ತೊಂದಿಲ್ಲ" ಎಂದು ಪತ್ರದಲ್ಲಿ ಪ್ರತಿಯೊಬ್ಬರೂ ಬರೆದು ಕೊಡಬೇಕೆಂದು ಅವನು ಪೀಡಿಸುತ್ತಿದನು. ಹಾಗೆ ಮಾಡದವರಿಗೆ ಕಠಿಣ ಶಿಕ್ಷೆ ವಿಧಿಸುತ್ತಿದ್ದನು. ಕಾಲಕ್ರಮದಲ್ಲಿ ರಾಜನು ರಾಮಾನುಜರಿಂದಲೂ ಈ ಘೋಷಣೆಯನ್ನು ಬರೆಯಿಸಿಕೊಳ್ಳಲು, ರಾಜಾಸ್ಥಾನಕ್ಕೆ ಬರಲು ಅಪ್ಪಣೆಯಿತ್ತು ರಾಜಭಟರನ್ನು ಅವರಲ್ಲಿಗೆ ಕಳುಹಿಸಿದನು. ಈ ಸಂಗತಿಯನ್ನರಿತ ಕೂರೇಶರು ತಮ್ಮ ಗುರುಗಳಿಗೆ ಅಪಾಯ ಸಂಭವಿಸಬಹುದೆಂದು ಶಂಕಿಸಿ, ತಕ್ಷಣ ಅವರು ಶ್ರೀರಂಗವನ್ನು ಬಿಡುವಂತೆ ಸಲಹೆಕೊಟ್ಟು, ತಾವೇ ರಾಮಾನುಜರೆಂದು ಸಂನ್ಯಾಸಿಯ ವೇಷದಲ್ಲಿ ರಾಜಸಭೆಗೆ ಬಂದರು. ಇವರ ಜೊತೆಗೆ ರಕ್ಷಣೆಗಾಗಿ ಮಹಾಪೂರ್ಣರೂ ಹೊರಟರು. ಅನ್ಯಮತದ್ವೇಷಿಯಾದ ಚೋಳರಾಜನು ಅವರು ತನ್ನ ಶೈವ ಸಿದ್ಧಾಂತವನ್ನು ಒಪ್ಪಿಕೊಳ್ಳದ ಪ್ರಯುಕ್ತ ಅವರ ಕಣ್ಣುಗಳನ್ನು ಕೀಳಿಸುವಂತೆ ಅವಮಾನ ಪಡಿಸಿದನು. ಮಹಾಪೂರ್ಣರು ಕಣ್ಣಿಲ್ಲದೆ ಹಿಂದಿರುಗುವಾಗ ಮಧ್ಯ ಮಾರ್ಗದಲ್ಲಿಯೇ ಪರಂಧಾಮ ವೈದಿದರು. ಕೂರೇಶರು ತಮ್ಮ ಕಣ್ಣುಗಳನ್ನು ತಾವೇ ಚುಚ್ಚಿಕೊಂಡ ಪ್ರಯುಕ್ತ ಕೊನೆಗಾಲದವರೆಗೂ ಅಂಧರಾಗಿರಬೇಕಾಯಿತು. ಈ ಮಧ್ಯೆ ರಾಜನು ರಾಮಾನುಜರನ್ನು ಹುಡುಕಿಸಿ, ಆ ಪ್ರಯತ್ನದಲ್ಲಿ ವಿಫಲನಾದನು.

ಇತ್ತ ಯತಿರಾಜರು ಶ್ರೀರಂಗದಿಂದ ಮೈಸೂರು ದೇಶಕ್ಕೆ ಹೊರಟರು.

ರಾಮನಾಥಪುರ, ಸಾಲಿಗ್ರಾಮಗಳ ಮಾರ್ಗವಾಗಿ ಪಾಂಡವಪುರ ಹತ್ತಿರವಿರುವ ತೊಂಡನೂರಿಗೆ ಬಂದರು. ಆಗ ಈ ಪ್ರಾಂತದಲ್ಲಿ ವಿಠಲದೇವರಾಯ ನೆಂಬುವನು ರಾಜ್ಯಭಾರ ಮಾಡುತ್ತಿದ್ದನು. ಈತನಿಗೆ ಬಿಟ್ಟಿದೇವ ನೆಂಬ ನಾಮಾಂತರವಿದೆ. ಈತನ ಹೆಣ್ಣು ಮಗಳಿಗೆ ಪಿಶಾಚಿ ಹಿಡಿದು, ರಾಜನು ಮಾಡಿಸಿದ್ದ ಮಂತ್ರತಂತ್ರಗಳೆಲ್ಲಾ ವ್ಯರ್ಥವಾಗಿತ್ತು. ಹಿಂದೆ ರಾಮಾನುಜರು ಬ್ರಹ್ಮಪಿಶಾಚವನ್ನು ಬಿಡಿಸಿದ್ದ ಸಂಗತಿಯು ಆ ರಾಜನಿಗೆ ತಿಳಿದ ಕೂಡಲೇ ಅವನು ಸ್ವಾಮಿಗಳನ್ನು ಕರೆಸಿಕೊಂಡು ತನ್ನ ಕಷ್ಟವನ್ನು ಪರಿಹರಿಸುವಂತೆ ಪ್ರಾರ್ಥಿಸಿದನು. ರಾಮಾನುಜರ ಪಾದತೀರ್ಥವನ್ನು ಅವರ ಶಿಷ್ಯರು ಭೂತಹಿಡಿದ ರಾಜಕುಮಾರಿಯ ಮೇಲೆ ಪ್ರೋಕ್ಷಿಸಿದ ಕೂಡಲೇ, ಭೂತೋಚ್ಚಾಟನೆಯಾಗಿ ಆ ಹೆಣ್ಣು ಮಗಳು ಗುಣಹೊಂದಿದಳು. ಬಿಟ್ಟಿ ದೇವನು ಸ್ವಾಮಿಗಳ ಮಹಾತ್ಮ್ಯಕ್ಕೆ ಆಶ್ಚರ್ಯಪಟ್ಟು, ಅವರ ಶಿಷ್ಯನಾದನು. ಸ್ವಾಮಿಗಳು ಅವನಿಗೆ ವಿಷ್ಣುವರ್ಧನನೆಂಬ ಹೆಸರನ್ನಿಟ್ಟರು. ಆ ಸಂದರ್ಭ ದಲ್ಲಿಯೇ ಸ್ವಾಮಿಗಳು ತೊಂಡನೂರಿನಲ್ಲಿ ಈಗಿರುವ ದೊಡ್ಡ ಕೆರೆಯನ್ನು ಕಟ್ಟಿಸಿದರು.

ಈ ವೇಳೆಗೆ ಶ್ರೀಭಾಷ್ಯಕಾರರಿಗೆ ಎಂಭತ್ತು ವರುಷಗಳ ಮೇಲೆ ವಯಸ್ಸಾಗಿತ್ತು. ಯತಿರಾಜಸ್ವಾಮಿಗಳು ತೊಂಡನೂರಿನಲ್ಲಿರುವಾಗ ಸ್ವಪ್ನದಲ್ಲಿ ಚೆಲುವ ನಾರಾಯಣಸ್ವಾಮಿಯು ಕಾಣಿಸಿಕೊಂಡು “ನಾನು ಇಲ್ಲಿಗೆ ಸಮೀಪದಲ್ಲಿರುವ ಮೇಲುಕೋಟೆ ಬೆಟ್ಟದಲ್ಲಿ ವಾಸವಾಗಿರುವೆನು. ನನ್ನನ್ನು ಈಚೆಗೆ ತೆಗೆದು ಪ್ರತಿಷ್ಠೆಮಾಡಿ ಉತ್ಸವಾದಿಗಳಿಗೆ ಏರ್ಪಾಟು ನಡೆಯಿಸು” ಎಂಬ ಸಂದೇಶ ವಿತ್ತಂತಾಯಿತು. ಕೂಡಲೇ ಸ್ವಾಮಿಗಳು ವಿಷ್ಣುವರ್ಧನನ ಸಹಾಯದಿಂದ ಅರಣ್ಯ ಪ್ರದೇಶದಲ್ಲಿದ್ದ ಸ್ವಾಮಿಯ ವಿಗ್ರಹವನ್ನು ತೆಗೆಯಿಸಿ ತಿರುನಾರಾಯಣ ಪುರದಲ್ಲಿ ದೊಡ್ಡ ದೇವಾಲಯವನ್ನು ಕಟ್ಟಿಸಿ, ಚಲುವ ನಾರಾಯಣ ಸ್ವಾಮಿಯ ಪ್ರತಿಷ್ಠೆ ಮಾಡಿಸಿದರು. ಆದರೆ ಅಲ್ಲಿದ್ದ ಉತ್ಸವಮೂರ್ತಿಯು ದೆಹಲಿಯ ಬಾದಷಹನ ಮಗಳಲ್ಲಿರುವುದು ಸ್ವಾಮಿಯ ದಿವ್ಯ ದೃಷ್ಟಿಗೆ ಗೋಚರವಾಯಿತು. ಕೂಡಲೇ ರಾಮಾನುಜರು ದೆಹಲಿಯ ಪ್ರವಾಸ ಮಾಡಿ ಪ್ರಯಾಸದಿಂದ ರಾಮಪ್ರಿಯ ಉತ್ಸವ ಮೂರ್ತಿಯನ್ನು ತಂದು ಪ್ರತಿಷ್ಠೆಮಾಡಿ ಉತ್ಸವಾದಿಗಳಿಗೆ ಏರ್ಪಾಟುಮಾಡಿಕೊಟ್ಟರು. ಹೀಗೆ ರಾಮಾನುಜರು ಮೈಸೂರು ದೇಶದಲ್ಲಿ ಹನ್ನೆರಡು ವರುಷಗಳ ಕಾಲ ನಿಂತು,

ವಿಷ್ಣುಭಕ್ತಿ ಪ್ರಚಾರ ನಡೆಸಿದರು.

ಇತ್ತ ಶ್ರೀರಂಗದಲ್ಲಿ ತಮ್ಮ ಶಿಷ್ಯರಿಗೆ ಚೋಳರಾಜನಿಂದ ಕಣ್ಣುಗಳು ಹೋದ ಸಂಗತಿ ಕೇಳಿ, ಸ್ವಾಮಿಗಳು ಬಹು ದುಃಖಿತರಾದರು. ಕೆಲವು ಕಾಲ ದಲ್ಲಿಯೇ ಆ ದುಷ್ಟ ಚೋಳರಾಜನು ತನ್ನ ಪಾಪದ ಫಲವಾಗಿ ಬೆನ್ನುಫಣಿ ರೋಗದಿಂದ ಮೃತನಾದನು ಈ ವರ್ತಮಾನಗಳು ಯತಿರಾಜರಿಗೆ ಗೊತ್ತಾದ ಮೇಲೆ ಅವರು ಶ್ರೀರಂಗಕ್ಕೆ ಮೈಸೂರು ದೇಶವನ್ನು ಬಿಟ್ಟು ಹೊರಟರು. ಸ್ವಾಮಿಗಳ ಆಗಮನದಿಂದ ಶ್ರೀರಂಗದ ಜನರಿಗೆ ಕಳೆದು ಹೋದ ನಿಧಿಯು ಮತ್ತೆ ದೊರೆಕಿದಷ್ಟು ಸಂತೋಷವಾಯಿತು. ಶ್ರೀರಂಗದ ಜನರು ಆಚಾರ್ಯ ರನ್ನು ಆದರದಿಂದ ಬರಮಾಡಿಕೊಂಡು ಪುರಸ್ಕರಿಸಿದರು. ಸ್ವಾಮಿಗಳು ಕೂಡಲೇ ಕೂರೇಶರನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು, ಅವರ ಸ್ಥಿತಿಗೆ ಮರುಗಿದರು. ಕೂರೇಶರಾದರೋ ಗುರುಗಳ ಅನುಗ್ರಹದಿಂದ ತಾವು ಪಡೆದಿರುವ ಜ್ಞಾನಬಲವೆಂಬ ಒಳಗಣ್ಣೇ ಸಾಕೆಂದು ಅವರಿಗೆ ಸಮಾಧಾನ ವಿತ್ತರು ಕೆಲವು ಕಾಲಾನಂತರ ಈ ಪ್ರಿಯಶಿಷ್ಯರು ದೈವಾಧೀನರಾಗಲು ಆಗ ಗುರುಗಳಿಗಾದ ದುಃಖಕ್ಕೆ ಪಾರವಿರಲಿಲ್ಲವಾಯಿತು.

ಶ್ರೀ ಭಾಷ್ಯಕಾರರ ಶಿಷ್ಯಂದಿರೆಲ್ಲರೂ ಮಹಾವ್ಯಕ್ತಿಗಳೇ ಆಗಿದ್ದರು. ಅವರಲ್ಲಿ ಪ್ರತಿಯೊಬ್ಬರ ವಿಷಯವನ್ನು ಹೇಳುತ್ತಾ ಹೋದರೆ, ಒಂದು ದೊಡ್ಡ ಇತಿಹಾಸವಾಗುತ್ತದೆ. ಇವರ ಶಿಷ್ಯವರ್ಗದಲ್ಲಿ ಏಳುನೂರು ಮಂದಿ ಸಂನ್ಯಾಸಿ ಗಳೂ, ಎಪ್ಪತ್ತನಾಲ್ಕು ಮಂದಿ ಆಚಾರ್ಯ ಪೀಠವನ್ನಲಂಕರಿಸಿದವರೂ, ಹನ್ನೆರಡ ಸಾವಿರ ಮಂದಿ ಏಕಾಂತಿಗಳೆನಿಸಿದ ಭಕ್ತರೂ ಇದ್ದರು. ಇವರಲ್ಲಿ ಅನೇಕ ಹೆಂಗಸರೂ ಸೇರಿದ್ದರಲ್ಲದೆ ಬರಿಯ ಬ್ರಾಹ್ಮಣರು ಮಾತ್ರವಲ್ಲದೆ ಎಲ್ಲ ಮತೀ ಯರಾದ ಶ್ರೀ ವಿಷ್ಣುಭಕ್ತರೂ ಶಿಷ್ಯಕೋಟಿಗೆ ಸೇರಿದ್ದರು.

ರಾಮಾನುಜರು ನೂರಿಪ್ಪತ್ತು ವರ್ಷಕಾಲ ಜೀವಿಸಿದ್ದರು. ಆಚಾ ರ್ಯರು ಭರತಖಂಡವನ್ನೆಲ್ಲಾ ಸುತ್ತಾಡಿ, ಎಲ್ಲ ಪಂಗಡದ ಜನರಿಗೂ ಉಪ ದೇಶಮಾಡಿ, ಭವಸಾಗರವನ್ನು ದಾಟಿ, ಮುಕ್ತಿ ಹೊಂದುವ ಉಪಾಯವನ್ನು ತಮ್ಮ ಭಕ್ತರಿಗೆ ತೋರಿಸಿಕೊಟ್ಟರು. ಆಚಾರ್ಯರಿಗೆ ಬಹಳ ವಯಸ್ಸಾದು ದರಿಂದ, ತಾವು ಪರಂಧಾಮಕ್ಕೆ ಹೋಗುವ ಕಾಲವು ಸಮೀಪಿಸಿತೆಂದು ತಿಳಿದು ಕೂಡಲೇ ಎಲ್ಲ ಶಿಷ್ಯರನ್ನೂ ತಮ್ಮ ಶಿಷ್ಯರಾದ "ಪಿಳ್ಳಾನ್" ಎಂಬುವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿದರು. ಕಡೆಗೆ ಕ್ರಿ. ಶ. ೧೧೩೭ರಲ್ಲಿ

ರಾಮಾನುಜರು ಪರಮಪದವನ್ನು ಸೇರಿದರು. ಆಚಾರ್ಯರ ಅಗಲಿಕೆಯಿಂದ ಎಲ್ಲರೂ ದುಃಖಸಾಗರದಲ್ಲಿ ಮುಳುಗಿದರು. ರಾಮಾನುಜರು ಭಾರತದಲ್ಲಿ ವಿಷ್ಣುಭಕ್ತಿ ಪ್ರಚಾರವಾಗಲು ಹೆಚ್ಚು ಕಾರಣರಾದರು. ಇವರು ಎತ್ತಿಹಿಡಿದ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ರಾಮಾನುಜರ ಸಿದ್ಧಾಂತವೆಂದೇ ಹೆಸರಾಗಿದೆ. ಶ್ರೀವೈಷ್ಣವ ಸಂಪ್ರದಾಯಸ್ಥರು ಇವರನ್ನು ದರ್ಶನಸ್ಥಾಪಕಾಚಾರ್ಯರೆಂದು ಕರೆಯುತ್ತಾರೆ.

ರಾಮಾನುಜರು ಮಹಾ ಮೇಧಾವಿಗಳು. ಅವರು ಬರಿಯ ಉಪದೇಶಕರು ಮಾತ್ರವಲ್ಲ. ಯಾವುದನ್ನೂ ಅನುಷ್ಠಾನಮಾಡಿ ತೋರಿಸಿ ಶಿಷ್ಯರನ್ನು ತಿದ್ದುತ್ತಿದ್ದರು. ಅವರ ದೃಷ್ಟಿ ವಿಶಾಲವಾದುದು. ಸಮಾಜದ ಹಿತಚಿಂತನೆ ಅವರ ಮುಖ್ಯಗುರಿಯಾಗಿತ್ತು. ಸರ್ವಮತೀಯರನ್ನು ಸಮದೃಷ್ಟಿಯಿಂದ ನೋಡಿದ ದಯಾಮೂರ್ತಿಯವರು. ಅನೇಕ ಮತೀಯರು ಇವರ ಶಿಷ್ಯಮಂಡಲಿಯಲ್ಲಿ ಕೂಡಿದರು. ಆಚಾರ್ಯರು ಶ್ರೀರಂಗದಲ್ಲಿದ್ದಾಗ ಬೇಡರ ಜಾತಿಯ ಧನುರ್ದಾಸನ ಭಕ್ತಿಗೆ ಮೆಚ್ಚಿ ಆಗಾಗ್ಗೆ ಅವನ ಹೆಗಲಮೇಲೆ ತೋಳುಗಳನ್ನಿಟ್ಟು ನಡೆದು ಹೋಗುತ್ತಿದ್ದರು. ಕುಲಗೋತ್ರಗಳು ಪ್ರಧಾನವಲ್ಲ. ಭಕ್ತಿಜ್ಞಾನಗಳು ವ್ಯಕ್ತಿಗಳ ಔನ್ನತ್ಯದ ಕುರುಹು. ಭಕ್ತರೂ ಜ್ಞಾನಿಗಳೂ ಪರಮ ಪೂಜ್ಯರು ಎಂಬ ಭಾವನೆಯನ್ನು ಅವರು ತಮ್ಮ ಪರಿವಾರಕ್ಕೆ ಮತ್ತೆ ಮತ್ತೆ ಬೋಧಿಸುತ್ತಿದ್ದರು. ಆಚಾರ್ಯರು ದೆಹಲಿಯಿಂದ ಮೇಲುಕೋಟೆಗೆ ಸಂಪತ್ಕುಮಾರಸ್ವಾಮಿಯ ವಿಗ್ರಹವನ್ನು ಬಿಜಯಮಾಡಿಸಿಕೊಂಡು ಬಂದಾಗ ಹರಿಜನರು ತೋರಿಸಿದ ಅಕೃತ್ರಿಮವಾದ ಭಕ್ತಿಭಾವನೆಯನ್ನು ಕಂಡು ಮೆಚ್ಚಿ ಅವರಿಗೆ ತತ್ತ್ವೋಪದೇಶಕ್ಕೆ ಅವಕಾಶಕೊಟ್ಟುದಲ್ಲದೆ–ಬಹು ಹಿಂದಿನ ಕಾಲದಲ್ಲಿಯೇ ದೇವಾಲಯ ಪ್ರವೇಶಕ್ಕೂ ಅವಕಾಶವನ್ನು ಕಲ್ಪಿಸಿದರು. ಒಟ್ಟಿನಲ್ಲಿ ರಾಮಾನುಜಾಚಾರ್ಯರ ಸುಗುಣಗಳು ಅನಂತ. ಅವರು ಸರ್ವರಿಂದಲೂ ಸನ್ಮಾನಿತರಾದ ಮಹಾವಿಭೂತಿಯಾಗಿ ಇಂದಿಗೂ ಲೋಕದಲ್ಲಿ ತಮ್ಮ ಹೆಸರನ್ನು ಚಿರಸ್ಥಾಯಿಯಾಗಿ ಮಾಡಿದವರೆನಿಸಿದ್ದಾರೆ.

# ಶ್ರೀ ರಾಮಕೃಷ್ಣ ಪರಮಹಂಸ

ಅನಾದಿಯಿಂದಲೂ ಜಗತ್ತಿನಲ್ಲಿ "ಧರ್ಮ" ಎಂಬುವುದರ ಮೇಲೆ ಅನೇಕ ವಿಚಾರ ಲಹರಿಗಳು ನಡೆಯುತ್ತಲೇ ಇವೆ. ಧರ್ಮದ ತಿರುಳನ್ನು ಕಂಡುಹಿಡಿದು ಜನಕ್ಕೆ ತೋರಿಸುವುದು ಕಷ್ಟತರವಾದ ಕೆಲಸವಾಗಿದೆ. ಶಾಖೋಪಶಾಖೆಗಳಿಂದ ಕೂಡಿದ ವೇದಗಳು ಅನೇಕವಾಗಿವೆ. ನೂರಾರು ಸ್ಮೃತಿಗಳು ಒಂದು ವಿಷಯವನ್ನೇ ಬೇರೆ ಬೇರೆಯಾಗಿ ಹೇಳುತ್ತವೆ. ಮುನಿಗಳ ವಚನದಲ್ಲಿ ವಿಶ್ವಾಸವನ್ನಿಡೋಣವೆಂದರೆ ಅವರೂ ಅನೇಕ ಮಂದಿ. ಒಟ್ಟಿನಲ್ಲಿ ಧರ್ಮದ ಮರ್ಮ ಗುಹೆಯಲ್ಲಿ ಅಡಗಿಕೂತಿದೆ. ಜಗತ್ತಿನ ಅನೇಕ ಜನಾಂಗ ತಮ್ಮ ತಮ್ಮ ಉತ್ಕೃಷ್ಟವೆಂದು, ಯುಕ್ತ್ಯಂತರಗಳಿಂದ ಸಾಧನೆಮಾಡಿ ಪರ ಧರ್ಮಗಳನ್ನು ದೂಷಿಸುತ್ತಾ ಮುಂದೆ ಮುಂದೆ ಸಾಗುತ್ತಿದೆ. ಮೂಲ ಧರ್ಮದ ಸ್ವರೂಪವನ್ನು ಕೆಲವೇ ಮಂದಿ ವಿಭೂತಿಪುರುಷರು ತಾವು ಕಂಡುಹಿಡಿದು ಆಚರಿಸಿ ಬೆಳಕಿಗೆ ತಂದಿರುತ್ತಾರೆ. 'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ" ಎಂದ ಶ್ರೀಕೃಷ್ಣನು ಧರ್ಮಕ್ಕೆ ಚ್ಯುತಿ ಬಂದಾಗ ನಾನು ಅವತರಿಸುತ್ತೇನೆಂದು ಗೀತೆಯಲ್ಲಿ ಅರ್ಜುನನಿಗೆ ಉಪದೇಶಿಸಿರುತ್ತಾನೆ. ಈ ಮಾತಿನ ಪ್ರಕಾರ ಒಬ್ಬನ ಬಾಯಿಂದ ಹೊರಬಿದ್ದ ತತ್ವವಿಚಾರವನ್ನು ಅನೇಕ ವರ್ಗದ ಜನ ತಲೆದೂಗಿ ಅಂಗೀಕರಿಸುವುದಾದರೆ, ಅದು ಸಾರವತ್ತಾದ ಅಂಶವೇ ಸರಿ. ಧರ್ಮವೆಂಬುವುದು ಅಂಗಡಿಬೀದಿಯಲ್ಲಿ ಕಾಸಿಗೆ ಸಿಗುವ ಸುಲಭವಾದ ಪದಾರ್ಥವಲ್ಲ. ಅನೇಕ ವರ್ಷ ಕಠಿಣವಾದ ತಪೋಮಾರ್ಗದಿಂದ ಸಾಧಿಸಿದ ದೊಡ್ಡ ವಿಚಾರ. ಸಾಮಾನ್ಯ ಮಾನವರು ಇದಕ್ಕೆ ಅಧಿಕಾರಿಗಳಲ್ಲ. ಭಗವದ್ವಿಭೂತಿಗೆ ಸೇರಿದವರು ಮಾತ್ರವೇ ಅಧಿಕಾರಿಗಳು. ಇಂತಹ ಮಹನೀಯರನ್ನು "ನನ್ನ ಅಂಶಸಂಭೂತರೆಂದು ತಿಳಿ" ಎಂದು ಕೃಷ್ಣನು ಗೀತೆಯಲ್ಲಿ ಅರ್ಜುನನಿಗೆ ತಿಳಿಸಿರುತ್ತಾನೆ. ಭಾರತದಲ್ಲಿ ಅನೇಕ ಧರ್ಮಗಳ ತಿಕ್ಕಾಟ ನಮ್ಮ ಅನುಭವಕ್ಕೆ ಬಂದಿದೆ. ಈ ಎಲ್ಲ ಧರ್ಮಗಳಲ್ಲಿಯೂ ನಿಜವಾದ ತಿರುಳಿದೆ

ಎಂದು ತೋರಿಸಿಕೊಟ್ಟ ವ್ಯಕ್ತಿಯೇ ರಾಮಕೃಷ್ಣ ಪರಮಹಂಸ ದೇವ. ಯಾವ ಧರ್ಮವನ್ನೂ ದೂಷಣೆಮಾಡದೆ ಎಲ್ಲವನ್ನೂ ಆಚರಿಸಿ ಕೃತಕೃತ್ಯನಾದ ಮಹಾ ವ್ಯಕ್ತಿ ಇವನು. ಕಠೋರ ತಪಶ್ಚರ್ಯೆಯಿಂದ ತಾನು ಕಂಡ ಬೆಳಕನ್ನು, ಅಜ್ಞಾನಾಂಧಕಾರದಲ್ಲಿ ದಾರಿಗಾಣದೆ ಬಿದ್ದಿದ್ದ ಜನಾಂಗಕ್ಕೆ ದಿವ್ಯಜ್ಯೋತಿಯನ್ನಿತ್ತು, ಮಹೋಪಕಾರಮಾಡಿದ ಈ ಮಹಾಪುರುಷನ ಜೀವನದ ಕೆಲವು ಘಟನೆಗಳನ್ನು ಈ ಮುಂದೆ ಚಿತ್ರಿಸಲು ಪ್ರಯತ್ನ ಪಡಲಾಗಿದೆ.

ದೈವಾಂಶಸಂಭೂತರು ಹುಟ್ಟುವ ವಂಶವೂ ಸಾಮಾನ್ಯವಾಗಿ ದೈವಭಕ್ತಿ, ಪರೋಪಕಾರ, ದಯಾದಾಕ್ಷಿಣ್ಯ ಮುಂತಾದ ಸದ್ಗುಣಗಳಿಂದಲೇ ಕೂಡಿರುತ್ತೆ. ಶ್ರೀರಾಮಚಂದ್ರನೇ ಕುಲದೈವವೆಂದು ನಂಬಿ ಆ ರಾಮಮೂರ್ತಿಯನ್ನು ಆರಾಧಿಸುತ್ತಿದ್ದ ರಾಮ ಭಕ್ತರ ಮನೆತನದಲ್ಲಿ ಜನಿಸಿದನು. ರಾಮಕೃಷ್ಣನ ಮುತ್ತಾತ ಮಾಣಿಕರಾಮನು ಬಂಗಾಳದಲ್ಲಿರುವ ದರಿಯಾಪುರವೆಂಬ ಸಣ್ಣ ಹಳ್ಳಿಯೊಂದರಲ್ಲಿ ನೆಲೆಸಿದ್ದನು. ಸಂಸಾರ ನಿರ್ವಹಣೆಗೆ ತಕ್ಕಷ್ಟು ನೆಲವೂ ಇತರ ಸೌಕರ್ಯಗಳೂ ಈತನಿಗಿದ್ದುವು. ಕ್ರಿ.ಶ. ೧೭೭೫ರಲ್ಲಿ ತನಗೆ ಹುಟ್ಟಿದ ಮಗನಿಗೆ ಮಾಣಿಕರಾಮನು 'ಖುದಿರಾಮ'ನೆಂದು ನಾಮಕರಣ ಮಾಡಿದನು.

ಖುದಿರಾಮನು ತನ್ನ ಹಳ್ಳಿಯಲ್ಲೆ ಸಾಕಷ್ಟು ವಿದ್ಯೆಯನ್ನು ಕಲಿತನು. ಇವನು ಇನ್ನೂ ಚಿಕ್ಕವನಿರುವಾಗಲೇ ತಂದೆಯು ತೀರಿಕೊಂಡನು. ಸಂಸಾರ ಭಾರವು ಖುದಿರಾಮನ ತಲೆಯಮೇಲೆ ಬಿತ್ತು. ದೈವಭಕ್ತನಾದ ಖುದಿರಾಮನು ರಮಾನಂದನೆಂಬ ಭಾಗ್ಯವಂತ ಜಮೀನ್ದಾರನ ಆಶ್ರಯ ಪಡೆದು ತನ್ನ ಜೀವನ ಪಥವನ್ನು ಮುಂದುವರಿಸಿದನು. ಈತನ ಮಡದಿಯೇ ಶ್ರೀಮತಿ ಚಂದ್ರಮಣಿ ದೇವಿ. ಈಕೆಯು ಗಂಡನಂತೆಯೇ ಸರಳಸ್ವಭಾವದವಳು, ಮನೆಯ ಬಾಗಿಲೆಗೆ ಬಂದ ಯಾಚಕರನ್ನು ಬರಿಗೈಯಲ್ಲಿ ಕಳುಹಿಸುತ್ತಿರಲಿಲ್ಲ. ಈ ದಂಪತಿಗಳು ಪರರಿಗೆ ಹಿಂಸೆಯನ್ನು ಮನಸ್ಸಿನಲ್ಲೂ ಎಣಿಸುತ್ತಿರಲಿಲ್ಲ. ದೀನದಲಿತರನ್ನೂ, ಸತ್ಪುರುಷರನ್ನೂ ಮನೆಗೆ ಕರೆಯಿಸಿಕೊಂಡು ಯಥಾಶಕ್ತಿ ಸೇವೆಮಾಡಿ ತೃಪ್ತಿಪಡಿಸುತ್ತಿದ್ದರು. ಎಂತಹ ವಿಪತ್ತು ಬಂದೊದಗಿದರೂ ಈ ದಂಪತಿಗಳು ಸತ್ಯದ ಹಾದಿಯಿಂದತಿಕ್ರಮಿಸಿ ನಡೆದವರಲ್ಲ ಲೋಕಪೂಜ್ಯನಾದ ವಿಭೂತಿ ಪುರುಷನನ್ನು ಈ ಸದ್ಗೃಹಸ್ಥನ ಹೊಟ್ಟೆಯಲ್ಲೇ ಇಡಬೇಕೆಂದು ಭಗವಂತನು ನಿರ್ಧರಿಸಿದನು.

ಈ ಮಧ್ಯೆ ಜಮೀನ್ದಾರ್ ರಮಾನಂದನು ಯಾವುದೋ ಕಛೇರಿಯ ವ್ಯವಹಾರದಲ್ಲಿ ಖುದಿರಾಮನು ತನ್ನ ಕಡೆಗೆ ಸಾಕ್ಷ್ಯಕೊಡಲು ನಿರಾಕರಿಸಿದ ನೆಂಬ ನೆಪದಮೇಲೆ ಸತ್ಯಬಾಹಿರವಾದ ವ್ಯವಹಾರವನ್ನು ಹೂಡಿ ಖುದಿರಾಮನ ಆಸ್ತಿಯನ್ನೆಲ್ಲಾ ಅಪಹರಿಸಿದನು. ಸ್ವತ್ತನ್ನು ಕಳೆದುಕೊಂಡ ಖುದಿರಾಮನು "ಅಗ್ನಿಯ ಮಧ್ಯದಲ್ಲಾದರೂ ಜೀವಿಸಬಹುದು; ಸತ್ಯ-ನೀತಿ ಬಾಹಿರರಾದ ಜನರೊಡನೆ ಕ್ಷಣಕಾಲವೂ ಇರಬಾರದು" ಎಂದು ನಿಶ್ಚಯಿಸಿ, ರಾಮಕುಮಾರ ನೆಂಬಮಗನೊಡನೆಯೂ ಗೃಹಿಣಿಯೊಡನೆಯೂ ದರಿಯಪುರದಿಂದಹೊರಟನು. ಪವಿತ್ರವಾದ ಪೂರೀ ಕ್ಷೇತ್ರಕ್ಕೆ ಸಮೀಪದಲ್ಲಿರುವ ಕಾಮರಾಪುಕುರವೆಂಬ ಹಳ್ಳಿಗೆ ಬಂದು ನೆಲಸಿದನು. ಪೂರೀ ಕ್ಷೇತ್ರಕ್ಕೆ ಹೋಗುವ ಯಾತ್ರಿಕರು ಈ ಹಳ್ಳಿಯಲ್ಲಿ ವಿಶ್ರಾಂತಿ ಪಡೆದು ಪ್ರಯಾಣ ಮುಂದುವರಿಸುತ್ತಿದ್ದರು. ಖುದಿ ರಾಮನಿಗೆ ಗೋಸ್ವಾಮಿಯೆಂಬ ಸಜ್ಜನರ ಸಹವಾಸವೂ ಆ ಹಳ್ಳಿಯಲ್ಲಿ ದೊರೆ ಯಿತು. ಗೋಸ್ವಾಮಿಯವರು ಖುದಿರಾಮನ ಗುಣಕ್ಕೆ ಪರವಶರಾಗಿ ತಮ್ಮ ಮನೆಯ ಒಂದು ಭಾಗವನ್ನು ಅವನಿಗೆ ವಾಸಕ್ಕಾಗಿ ಕೊಟ್ಟಿದ್ದಲ್ಲದೆ ಜೀವನ ಕ್ಕಾಗಿ ಸ್ವಲ್ಪ ಜಮೀನನ್ನೂ ಕೊಟ್ಟು ಸಹಾಯ ಮಾಡಿದರು. ಆ ಸ್ವಲ್ಪ ಜಮೀನೇ ಖುದಿರಾಮನ ಸಂಸಾರವನ್ನು ನಿರಾತಂಕವಾಗಿ ನಡೆಸಿತು. ವಿರಾಮ ಕಾಲದಲ್ಲಿ ಖುದಿರಾಮನು ಶ್ರೀರಾಮ ಭಜನೆಯಲ್ಲಿಯೇ ಕಾಲಕಳೆಯು ತ್ತಿದ್ದನು.

ಒಂದು ದಿನ ಖುದಿರಾಮನು ಕಾರ್ಯಾಂತರದಿಂದ ನೆರೆಯೂರಿಗೆ ಹೋಗಿ ಹಿಂದಿರುಗುತ್ತಿದ್ದನು. ಮಾರ್ಗಾಯಾಸದಿಂದ ಬಳಲಿ ಮಧ್ಯದಾರಿಯಲ್ಲಿ ಒಂದು ಮರದ ಕೆಳಗೆ ವಿಶ್ರಾಂತಿ ಪಡೆಯಲು ಕುಳಿತನು. ನಿದ್ರಾದೇವಿಯು ಅವನನ್ನು ಬಲಾತ್ಕಾರವಾಗಿ ತನ್ನಧೀನಕ್ಕೆ ತೆಗೆದುಕೊಂಡಳು. ನಿದ್ರೆಯಲ್ಲಿ ಅವನಿಗೊಂದು ಕನಸು ಬಿತ್ತು. ಆತನ ಕುಲದೈವನಾದ ರಘುವೀರನು "ಇಲ್ಲಿಯೇ ಹತ್ತಿರದಲ್ಲಿ ನಾನಿರುವೆನು; ಅನೇಕ ದಿನಗಳಿಂದ ನನಗೆ ಪೂಜೆ ಪುನಸ್ಕಾರಗಳು ಇಲ್ಲ; ಉಪವಾಸದಿಂದ ಆಯಾಸವಾಗಿದೆ; ನನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು; ನೀನು ಶ್ರದ್ಧಾಭಕ್ತಿಯಿಂದ ಮಾಡುವ ಸೇವೆಯನ್ನು ಸ್ವೀಕರಿಸಲು ಸಿದ್ಧನಿರುವೆನು" ಎಂದು ತಿಳಿಸಿದ ಹಾಗೆ ಸ್ವಪ್ನ ವಾಯಿತು. ಎಚ್ಚರಗೊಂಡ ಖುದಿರಾಮನಿಗೆ ಸ್ವಪ್ನದ ಅನುಭವದಿಂದ ಕಣ್ಣು

ನಲ್ಲಿ ಆನಂದಾಶ್ರುಗಳು ಚೆಲ್ಲಾಡಿದುವು. ತನ್ನ ಮನೆಗೆ ದೊಡ್ಡ ನಿಧಿಯೇ ಬಂದಿತೆಂದು ಭಾವಿಸಿದನು. ಕೂಡಲೆ ಸ್ವಪ್ನದಲ್ಲಾದಂತೆ ಭಗವಂತನಿರುವ ಸ್ಥಳವೂ ಕಣ್ಣಿಗೆ ಗೋಚರವಾಯಿತು. ಆ ಸ್ಥಳಕ್ಕೆ ಧಾವಿಸಿದನು ಆಗ ರಾಮಮೂರ್ತಿಯ ಸಾಲಗ್ರಾಮಶಿಲೆಯೊಂದನ್ನು ಸರ್ಪವೊಂದು ಕಾಯುತ್ತಿತ್ತು. ಖುದಿರಾಮನು ಬಂದೊಡನೆ ಆ ಸರ್ಪವು ಕಣ್ಮರೆಯಾಯಿತು. ಸಾಲಗ್ರಾಮಶಿಲೆಯನ್ನು ಆತನು ಆನಂದದಿಂದ ಕೈಗೆತ್ತಿಕೊಂಡನು. ಮೈಯೆಲ್ಲಾ ರೋಮಾಂಚನವಾಯಿತು. ದೇವಾಧಿದೇವತೆಗಳೂ ಯೋಗಿಶ್ರೇಷ್ಠರೂ ಬ್ರಹ್ಮಸಾಕ್ಷಾತ್ಕಾರ ಪಡೆಯಲು ಎಷ್ಟೆಷ್ಟು ಕಠಿಣ ತಪಶ್ಚರ್ಯೆ ನಡೆಯಿಸುವರು ! ಆದರೂ ಅವರಿಗೆ ಸಾಕ್ಷಾತ್ಕಾರವಾಗುವುದು ಬಹಳ ಕಾಲದ ಮೇಲೆ. ಮುನಿಶ್ರೇಷ್ಠರು ಯಾವ ಭಗವಂತನನ್ನು ಸ್ಮರಣೆಗೆ ತಂದುಕೊಳ್ಳುವುದಕ್ಕೂ ಅಸಮರ್ಥರೋ, ಅಂತಹ ಭಗವಂತನು ಆ ಶಿಲೆಯಲ್ಲಿ ಖುದಿರಾಮನಿಗೆ ಶ್ರೀರಾಮ ರೂಪದಿಂದ ಪ್ರತ್ಯಕ್ಷನಾದನು. ಪ್ರೀತಿಯಿಂದ ಆ ಶಿಲೆಯನ್ನು ತನ್ನದೆಯಲ್ಲಿಟ್ಟು ಮನೆಗೆ ಕೊಂಡೊಯ್ದು ಪ್ರತಿಷ್ಠೆ ಮಾಡಿ ಕುಲದೇವತೆಯೆಂದು ಆದರದಿಂದ ನಿತ್ಯವೂ ಪೂಜಿಸುತ್ತಿದ್ದನು.

ರಘುವೀರನ ಅನುಗ್ರಹದಿಂದ ಈ ದಂಪತಿಗಳಿಗೆ ಕ್ರಿ.ಶ. ೧೮೩೬ನೆಯ ಫೆಬ್ರುವರಿ ೧೮ನೆಯ ತಾರೀಖು ಒಂದು ಗಂಡು ಶಿಶುವಾಯಿತು. ದಂಪತಿಗಳು ಆಡಂಬರವಿಲ್ಲದೆ ಮಗುವಿನ ಜನ್ಮೋತ್ಸವವನ್ನು ಆಚರಿಸಿದರು. ಶುಭ ಮಹೂರ್ತದಲ್ಲಿ ಮಾತಾಪಿತೃಗಳು 'ಗಧಾಧರ'ನೆಂದು ಮಗುವಿಗೆ ನಾಮಕರಣ ಮಾಡಿದರು. ಈ ಮಗುವೇ ಮುಂದೆ ಅಭಿವೃದ್ಧಿ ಹೊಂದಿ ರಾಮಕೃಷ್ಣ ಪರಮಹಂಸ ದೇವನೆಂಬ ಹೆಸರಿನಿಂದ ಪ್ರಸಿದ್ಧಿ ಪಡೆದನು. ಸತ್ಪುರುಷರು ಜನಿಸಿದರೆ ಆ ನಾಡಿಗೆ ಕಲ್ಯಾಣವಾಗುವುದು; ಸಜ್ಜನರಿಗೆ ದ್ರವ್ಯಲಾಭವಾಗುವುದಲ್ಲದೆ ಪಶು ಸಸ್ಯ ಸಂಪತ್ತುಗಳೂ ಆ ನಾಡಿನಲ್ಲಿ ಅಭಿವೃದ್ಧಿಯಾಗುವುವು. ಅಂತೆಯೆ ಗದಾಧರನ ಜನನದಿಂದ ಖುದಿರಾಮನ ಸಂಸಾರದಲ್ಲಿ ಹಣಕಾಸಿನ ಕೊರತೆಯು ಕಡಿಮೆಯಾಯಿತು. ಗದಾಧರನ ಜನ್ಮ ವೊದಲುಗೊಂಡು ಅನೇಕ ಅಲೌಕಿಕ ಅನುಭವಗಳು ಆ ದಂಪತಿಗಳ ಅನುಭವಕ್ಕೆ ಬಂದುವು. ಖುದಿರಾಮನು ಜೋಯಿಸರ ಮೂಲಕ ಶಿಶುವಿನ ಜನ್ಮ ಪತ್ರ ಬರೆಯಿಸಿದನು. ಜೋಯಿಸರು ಮಗುವಿನ ಭವಿಷ್ಯವನ್ನು ಬರೆಯುತ್ತಾ "ದೇವಾಂಶಸಂಭೂತನೀತನು. ಪ್ರಾಣಿಸಾಮಾನ್ಯವನ್ನೂ ಪರಬ್ರಹ್ಮನ ಸ್ವರೂಪವೆಂದು ಗೌರವಿಸು

ವನು. ಮುಂದೆ ಈತನು ಅನೇಕ ಶಿಷ್ಯರೊಡಗೂಡಿ ದೇವಮಂದಿರದಲ್ಲಿ ವಾಸಿಸುತ್ತಾ ಧರ್ಮೋಪದೇಶಕನಾಗಿರುವನು" ಎಂದು ಭವಿಷ್ಯವನ್ನು ಸೂಚಿಸಿದರು.

ಗದಾಧರನಿಗೆ ಆರನೆಯ ತಿಂಗಳಲ್ಲಿ ಅನ್ನಪ್ರಾಶನಕರ್ಮ ನಿರಾಡಂಬರವಾಗಿ ನಡೆಯಿತು. ಆ ಸಮಯದಲ್ಲಿ ಬಂಧುಗಳಿಗೂ, ಬಡಬಗ್ಗರಿಗೂ ಖುದಿರಾಮನು ಊಟ ಮಾಡಿಸಿದನು. ಮಗುವಿನ ತೇಜಃಪುಂಜವಾದ ಮುಖವನ್ನು ನೋಡಿ ಜ್ಞಾನಿಗಳು ದೃಷ್ಟಿತಾಕದಿರಲೆಂದು ಹರಸಿದರು. ಚಂದ್ರಮಣೀದೇವಿಯು ಒಂದು ದಿನ ಮಗುವನ್ನು ಎತ್ತಿಕೊಳ್ಳಲು ಕೈಚಾಚಿದಳು. ಮಗುವು ಕಬ್ಬಿಣದ ಘಟ್ಟಿಯಂತೆ ಬಹಳ ಭಾರವಾಗಿ ಎತ್ತಿಕೊಳ್ಳಲು ಆಗಲಿಲ್ಲ. ಗಂಡನನ್ನು ಕೂಗಿ ತಿಳಿಸಿದಳು. ಖುದಿರಾಮನು ಮಗುವನ್ನು ಸುಲಭವಾಗಿ ಹೂವಿನಂತೆ ಎತ್ತಿಕೊಂಡನು. ಹೀಗೆ ಮಗುವು ಕೆಲವು ವೇಳೆ ಭಾರವಾಗಿಯೂ ಕೆಲವು ವೇಳೆ ಹಗುರವಾಗಿಯೂ ಇವರ ಅನುಭವಕ್ಕೆ ಬರುತಿತ್ತು. ಒಂದು ದಿನ ತೊಟ್ಟಿಲಲ್ಲಿ ಮಲಗಿದ್ದ ಕೂಸನ್ನು ಎತ್ತಿಕೊಳ್ಳಲು ಚಂದ್ರಮಣೀದೇವಿಯು ಕಟ್ಟಿದ್ದ ಪರದೆಯನ್ನು ಪಕ್ಕಕ್ಕೆ ಸರಿಸಿದಳು. ತೊಟ್ಟಿಲಲ್ಲಿ ಮಗುವಿಗೆ ಬದಲು ಒಬ್ಬ ತರುಣನು ಮಲಗಿರುವ ಹಾಗೆ ಆಕೆಗೆ ಭಾಸವಾಯಿತು. ಆಕೆ ಗಾಬರಿಬಿದ್ದು ಗಂಡನನ್ನು ಕೂಗಿದಳು. ಖುದಿರಾಮನು ಓಡಿ ಬಂದು ನೋಡಿದನು. ಮಗುವು ಶಾಂತವಾಗಿ ನಿದ್ರೆ ಹೋಗುತ್ತಿತ್ತು. ಆಗ ಕೆಟ್ಟ ಗ್ರಹದ ಕೈವಾಡವಿರಬಹುದೆಂದು ತಾಯಿಯ ಕರಳು ಹೆದರಿತು. ಭೂತಸಂಚಾರವಾಗಿರಬಹುದೆಂದು ದೇವಿಯು ಭಯದಿಂದ ನಡುಗಿದಳು. ಮಗುವು ಬೆಳೆದು ತಮ್ಮ ಮುಂದೆ ಆಡಿ ನಲಿದು ತಾಯಿ – ತಂದೆಗಳಿಗೆ ಸಂತೋಷಕೊಡಲಾರದೆಂದು ಆಕೆ ಊಹಿಸಿದಳು. ಬರಬರುತ್ತಾ ದೇವಿಗೆ ಮಗುವಿನ ನಿಮಿತ್ತ ಭಾರಿ ಚಿಂತೆಯೇ ಆಗಿ ವ್ಯಸನದಿಂದ ಕೊರಗುತ್ತಿದ್ದಳು. ಖುದಿರಾಮನು ಚಂದ್ರಮಣಿದೇವಿಯ ದುಗುಡವನ್ನು ತಿಳಿದು "ಇದು ಭಗವದಂಶದಿಂದ ಜನಿಸಿದ ಮಕ್ಕಳ ರೀತಿಯಲ್ಲದೆ ಬೇರೆಯಲ್ಲ; ಮಗುವು ದೈವೀ ಸಂಪತ್ತಿನಿಂದ ಕೂಡಿ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿದೆ. ಇದಕ್ಕಾಗಿ ಭಯಪಡಬೇಕಾಗಿಲ್ಲ; ಅನೇಕ ಬಾರಿ ಈ ವಿಷಯವಾಗಿ ನನಗೆ ಕನಸು ಬಿದ್ದಿದೆ; ಇದರ ಮೇಲೆ ಶ್ರೀರಾಮಚಂದ್ರನ ದಯೆ ನಮಗಿದ್ದೇ ಇದೆ" ಎಂಬುದಾಗಿ ಹೇಳಿ ಆಕೆಯನ್ನು ಸಮಾಧಾನಪಡಿಸಿದನು.

ಗದಾಧರನಿಗೆ ಐದು ವರ್ಷ ತುಂಬುತ್ತಲೆ ಖುದಿರಾಮನು ಅವನನ್ನು ಪಾಠಶಾಲೆಗೆ ಸೇರಿಸಿದನು. ಗದಾಧರನು ಸತೀರ್ಥರೊಡನೆ ಓದುಬರೆಹ ಕಲಿತನು. ಗುರುಗಳಿಗೂ ಆಪ್ತ ಶಿಷ್ಯನಾದನು. ಮನಸ್ಸಿಟ್ಟು ಅಭ್ಯಾಸ ಮಾಡಿದರೂ ಅವನ ತಲೆಗೆ ಗಣಿತ ಮಾತ್ರ ಹಿಡಿಯಲಿಲ್ಲ. ಗಣಿತವೆಂದರೆ ಗದಾಧರನಿಗೆ ತಲೆನೋವು ಹಿಡಿಯುತ್ತಿತ್ತು. ಕ್ರಮೇಣ ಶಾಲೆಯ ವಿದ್ಯಾಭ್ಯಾಸ ಅವನಿಗೆ ರುಚಿಸಲಿಲ್ಲ. ಅದು ಬಂಧನವನ್ನು ಕಲಿಸುವ ವಿದ್ಯೆಯಾಗಿತ್ತು. ಅವನಿಗೆ ಬೇಕಾದ್ದು "ಸಾ ವಿದ್ಯಾ ಯಾ ವಿಮುಕ್ತಯೇ" ಎಂಬಂತೆ ಬಂಧನ ವನ್ನು ಬಿಡಿಸಿ ಮೋಕ್ಷದಾಯಕವಾದ ವಿದ್ಯೆ ಬೇಕಾಗಿತ್ತು.

ಆಗಿನ ಕಾಲದಲ್ಲಿ ರಾಮಾಯಣ ಭಾಗವತ ಮುಂತಾದ ಪುರಾಣಗಳಿಂದ ಕೆಲವು ಭಾಗಗಳನ್ನು ಬೈಲಾಟದಲ್ಲಿ ಆಡಿ ತೋರಿಸುತ್ತಿದ್ದರು. ಇದನ್ನೆಲ್ಲಾ ನೋಡಲು ಗದಾಧರನಿಗೆ ಬಹಳ ಕುತೂಹಲ. ಭಕ್ತಿರಸಪ್ರಧಾನವಾದ ಕೀರ್ತನೆಗಳನ್ನು ಕೇಳಿ ಸ್ವತಃ ತಾನೇ ಇಂಪಾಗಿ ಹಾಡಲು ಕಲಿತನು. ಊರಿನ ತನ್ನ ವಯಸ್ಸಿನ ಮಕ್ಕಳಿಗೆ ಪುರಾಣಪುಣ್ಯಕಥೆಗಳನ್ನು ಹೇಳುವನು. ಬಾಲ್ಯದಲ್ಲಿಯೆ ಅವನ ಮನಸ್ಸು ಭಕ್ತಿಮಾರ್ಗದಲ್ಲಿ ಪದಾರ್ಪಣೆಮಾಡಿತು. ಹಳ್ಳಿಗ ಸಮೀಪದಲ್ಲಿರುವ ಕಾಡಿನಲ್ಲಿ ತಾನೊಬ್ಬನೇ ಕುಳಿತು ಹಾಡುವನು. ಪುರಾಣಗಳನ್ನು ಓದಿ ಅದರಲ್ಲಿರುವ ಸಾರಗಳನ್ನು ಗ್ರಹಿಸಿದನು. ಇದರ ಜೊತೆಗೆ ಅವನಿಗೆ ಬರುತ್ತಿದ್ದ ಕಲೆಯೆಂದರೆ, ಮಣ್ಣಿನಲ್ಲಿ ಅಂದವಾಗಿ ಬೊಂಬೆ ಯನ್ನು ಮಾಡಿ ಅವಯವಗಳಿಗೆ ತಕ್ಕಂತೆ ಬಣ್ಣ ಕೊಡುತ್ತಿದ್ದನು. ಏಳು ವರ್ಷ ವಯಸ್ಸಿನ ಗದಾಧರ ಅನೇಕ ವೇದಾಂತ ವಿಷಯಗಳ ಜಟಿಲ ಸಮಸ್ಯೆ ಗಳನ್ನು ಬಿಡಿಸುವುದರಲ್ಲಿ ಕಾಲ ಕಳೆಯುತ್ತಿದ್ದನು. ಈ ರೀತಿಯ ಜ್ಞಾನ ದಾಹ ದಿನದಿನಕ್ಕೂ ಅವನಿಗೆ ಹೆಚ್ಚಿತು. ತನಗೆ ಸರಿಯಾಗಿ ಕಂಡ ಅಂಶ ವನ್ನು ಪುಸ್ತಕದಲ್ಲಿ ಬರೆದಿಡುವನು. (ಈ ಬಗೆಯ ಲೇಖನಗಳು ಈಗಲೂ ಕಲ್ಕತ್ತೆಯ ಬೇಲೂರುಮಠದಲ್ಲಿ ಇಡಲ್ಪಟ್ಟಿವೆ.)

ಈ ಮಧ್ಯೆ ಚಿಕ್ಕ ವಯಸ್ಸಿನ ಗದಾಧರ ಮತ್ತೊಂದು ಮಹಾ ದುಃಖ ವನ್ನು ಎದುರಿಸಬೇಕಾಯಿತು. ಖುದಿರಾಮನು ಸಾಲಂಪೂರಿನಲ್ಲಿ ನಡೆಯು ತ್ತಿದ್ದ ದುರ್ಗಾದೇವಿ ಪೂಜೆಗೆ ಪ್ರತಿವರ್ಷವೂ ತಪ್ಪದೆ ಹೋಗುತ್ತಿದ್ದನು. ಶರೀರದಲ್ಲಿ ಆಮಶಂಕೆಯ ಉಪದ್ರವವಿದ್ದರೂ, ಅದನ್ನು ನಿರ್ಲಕ್ಷಿಸಿ ದೇವಿ ಪೂಜೆಗಾಗಿ ಪ್ರಯಾಣ ಮಾಡಿದನು. ಸಾಲಂಪೂರು ತಲಪಿದೊಡನೆ ಉಪ

ಧ್ರವವು ಅಧಿಕವಾಗಿ ಖುದಿರಾಮನು ರಾಮನಾಮಸ್ಮರಣೆ ಮಾಡುತ್ತಾ ತನ್ನ ಭೌತಿಕ ಶರೀರವನ್ನು ತ್ಯಜಿಸಿದನು. ಈ ವರ್ತಮಾನವು ಮಿಂಚಿನಂತೆ ಕಾಮಾರಾ ಪುಕೂರಿಗೆ ತಲಪಿತು. ಚಂದ್ರಮಣೀ ದೇವಿಗೆ ಸಿಡಿಲು ಬಡಿದಂತಾಯಿತು. ಆಕಾಶವೇ ಕಳಚಿ ಬಿದ್ದಂತಾಯಿತು. ಆಗ ಆಕೆಗೆ ಜಗತ್ತು ಶೂನ್ಯವಾಗಿ ಕಂಡಿತು. ತಂದೆಯು ಸ್ವರ್ಗಸ್ಥನಾದ ವಿಚಾರ ಕೇಳಿ ಗದಾಧರನು ಬಹಳ ವ್ಯಸನಪಟ್ಟನು. ಅವನ ಗುಣಗಳನ್ನು ನೆನೆನೆನೆದು ಬಿಕ್ಕಿಬಿಕ್ಕಿ ಅಳುವನು. ಬಾಲ್ಯದಲ್ಲಿಯೇ ಜನನ-ಮರಣ ಸಮಸ್ಯೆಗಳನ್ನು ತೂಕಮಾಡುವ ಶಕ್ತಿ ಅವನಲ್ಲಿತ್ತು. ಇನ್ನೂ ಎಳೆಯದಾದ ಹೃದಯವು ಪಿತೃವಿಯೋಗವೆಂಬ ದುಸ್ಸಹ ವ್ಯಥೆಯನ್ನು ಸಹಿಸದಾಯಿತು. ಬಲಿಯದ ಮಿದುಳು ಕಠಿಣವಾದ ವಿಚಾರ ಗಳನ್ನು ಚಿಂತಿಸತೊಡಗಿತು. ಗದಾಧರನು ಪಿತೃಮರಣದಿಂದುಂಟಾದ ದುಃಖ ವನ್ನು ಸಾಹಸದಿಂದ ತಡೆದುಕೊಂಡರೂ, ತಾಯಿಯ ದುಸ್ಸಹವಾದ ದುಗುಡ ವನ್ನು ಸಮಾಧಾನಪಡಿಸಲು ಅಸಮರ್ಥನಾದನು.

ವೈಧವ್ಯದ ದುಃಖಾಂಬುಧಿಯಲ್ಲಿ ಮುಳುಗಿದ ಚಂದ್ರಮಣೀದೇವಿಯು ತನ್ನ ಎಲ್ಲ ಕಾಲವನ್ನೂ ಭಗವತಿಯ ಧ್ಯಾನದಲ್ಲೇ ಕಳೆಯುತ್ತಿದ್ದಳು. ಅಂತೂ ತಾಯಿಯ ದುಃಖವನ್ನು ಕಡಿಮೆ ಮಾಡಲು ಗದಾಧರನು ಬಹಳ ಪ್ರಯತ್ನ ಪಟ್ಟನು. ಆಕೆಯು ಪೂಜೆಗೆ ಕೂರಲು ಸಾಮಗ್ರಿಗಳನ್ನು ತಾನೇ ಸಿದ್ಧಪಡಿಸಿ ಕೊಡುವನು. ಸಂಜೆಯ ಹೊತ್ತು ಆಟದಲ್ಲಿ ಹೆಚ್ಚು ಕಾಲ ಕಳೆಯದೆ 'ತಾಯಿ ಏನೆಂದುಕೊಂಡಾಳೋ' ಎಂದು ಹೊತ್ತಿಗೆ ಮುಂಚೆ ಮನೆಗೆ ಬರುತ್ತಿದ್ದನು. ತಾಯಿಯ ಮನಸ್ಸಿಗೆ ಹಿತವಾಗುವಂತೆ ತನ್ನ ಮಧುರವಾದ ಕಂಠದಲ್ಲಿ ಕೀರ್ತನೆಗಳನ್ನು ಹಾಡಿ ರಘುವರನ ಪೂಜೆ ಮಾಡುತ್ತಿದ್ದನು. ಇದರಿಂದ ತಾಯಿಯ ಬೆಂದ ಹೃದಯಕ್ಕೆ ಸ್ವಲ್ಪ ಶಾಂತಿ ದೊರೆಯಿತು.

ಕಾಮಾರಾಪುಕುರವು ಪೂರೀ ಕ್ಷೇತ್ರಕ್ಕೆ ಹೋಗುವ ದಾರಿಯಲ್ಲಿದ್ದುದ ರಿಂದ ಆ ಕ್ಷೇತ್ರಕ್ಕೆ ಹೋಗುವ ಸಾಧುಸಂತರೆಲ್ಲರೂ ಅಲ್ಲಿ ಬಿಡಾರ ಮಾಡು ತ್ತಿದ್ದರು. ಅವರೊಡನೆ ಗದಾಧರನು ಕುಳಿತು ಕೆಲವು ವಿಷಯಗಳನ್ನು ಚರ್ಚಿಸುವನು. ಯಾತ್ರಿಕರಿಗೆ ಇಳಿದುಕೊಳ್ಳಲು ಆ ಹಳ್ಳಿಯಲ್ಲಿ ಒಂದು ಸತ್ರವಿತ್ತು. ಗದಾಧರನಿಗಾದರೋ ಆ ಸತ್ರದಲ್ಲಿ ಕುಳಿತು ಅವರಿಂದ ಕಥೆ ಕೇಳುವುದು, ಕೀರ್ತನೆ ಹೇಳಿಸಿಕೊಳ್ಳುವುದು, ಕಲಿತಿದ್ದನ್ನು ಅಭ್ಯಾಸ ಮಾಡು

ವುದು, ಅವನ ದಿನಚರಿಯಾಗಿಬಿಟ್ಟಿತು. ಗುರುದಕ್ಷಣೆ ಕೊಟ್ಟಲ್ಲದೆ ಹೇಳಿ ಕೊಟ್ಟ ವಿದ್ಯೆ ಸುದೃಢವಾಗಿ ನಿಲ್ಲದಷ್ಟೆ. ಪಾಪ ! ಬಡ ಗದಾಧರನು ಅವರಿಗೆ ಏನು ಗುರುದಕ್ಷಿಣೆ ಕೊಟ್ಟಾನು ? ಆದರೂ ಗದಾಧರನು ಸದ್ವಿದ್ಯೆಯನ್ನು ಉಪದೇಶಿಸಿದ ಆ ಸಾಧುಗಳಿಗೆ ಅಡಿಗೆ ಮಾಡಿಕೊಳ್ಳಲು ನೀರನ್ನು ತಂದು ಕೊಡುವುದು, ಒಣಗಿದ ಸೌದೆ - ಪುರಳೀ ಕಡ್ಡಿಗಳನ್ನು ಆಯ್ದು ತಂದು ಕೊಡುವುದು - ಇವೇ ಮೊದಲಾದ ರೀತಿಯ ಸೇವೆಮಾಡಿ ಅವರನ್ನು ತೃಪ್ತಿಪಡಿಸಿದನು.

ಗದಾಧರನಿಗೆ ಒಂಭತ್ತು ವರ್ಷ ತುಂಬುತ್ತಲೇ ಉಪನಯನ ಸಂಸ್ಕಾರವೂ ನಡೆಯಿತು. ಉಪನಯನವಾದ ಮೇಲೆ ವಟುವು ಭಿಕ್ಷಾನ್ನದಿಂದಲೇ ಜೀವಿಸ ಬೇಕೆಂದು ಸಂಪ್ರದಾಯವುಂಟು. ಗದಾಧರನು ಉಪನಯನಕ್ಕೆ ಮುಂಚೆ ಕಮ್ಮಾರರ ಜಾತಿಯವಳಾದ “ಧಾನಿ” ಎಂಬುವಳಿಗೆ ಮೊದಲ ಭಿಕ್ಷೆಯನ್ನು “ನಿನ್ನ ಕೈಯಲ್ಲಿ ಸ್ವೀಕರಿಸುತ್ತೇನೆಂತ” ಮಾತು ಕೊಟ್ಟಿದ್ದನಂತೆ. ಆದರೆ ಬ್ರಾಹ್ಮಣನು ನೀಚಜಾತಿಯವಳಲ್ಲಿ ಭಿಕ್ಷೆ ಬೇಡುವುದು ಆಗಿನ ಸಮಾಜಕ್ಕೆ ವಿರೋಧವಾಗಿತ್ತು. ಮನೆಯವರೂ ಸಂಪ್ರದಾಯ ಶರಣರೂ ಕೂಡದೆಂದು ಗದಾಧರನನ್ನು ತಡೆದರು. ಆದರೆ ಕೊಟ್ಟ ಭಾಷೆಗೆ ತಪ್ಪಲು ಗದಾಧರನು ಸಿದ್ಧನಿರಲಿಲ್ಲ. ಅವನು ಮೊದಲ ಭಿಕ್ಷೆಯನ್ನು ಧಾನಿಯ ಕೈಯಲ್ಲೇ ಹಾಕಿಸಿ ಕೊಂಡು ಕೊಟ್ಟ ಭಾಷೆಯನ್ನುಳಿಸಿಕೊಂಡನು. ಹೀಗೆ ಚಿಕ್ಕಂದಿನಿಂದಲೇ ಅವನ ಸತ್ಯನಿಷ್ಠೆ ಜನರಿಗೆ ಮೇಲ್ಪಟ್ಟಿಯಾಗಿತ್ತು.

ತಾಯಿಯ ಅಪ್ಪಣೆಯಂತೆ ಗದಾಧರನು ತಾನೇ ಸ್ವತಂತ್ರವಾಗಿ ರಾಮ ಪೂಜೆ ನಡೆಸುತ್ತಿದ್ದನು. ನಿಷ್ಕಲ್ಮಷವಾದ ಹೃದಯದಿಂದ ಭಗವಂತನನ್ನು ಧ್ಯಾನಿಸುತ್ತಿದ್ದನು. ಚರ್ಮಚಕ್ಷುಸ್ಸಿಗೆ ಭಗವತ್ಸ್ವರೂಪವು ಗೋಚರಿಸು ವುದಿಲ್ಲ. ಜ್ಞಾನಚಕ್ಷುಸ್ಸಿಗೆ ಮಾತ್ರವೇ ಅವನು ಗೋಚರನು. ಭಗವಧ್ಯಾನಕ್ಕೆ ಕುಳಿತರೆ ಗದಾಧರನ್ನು ತನ್ನನ್ನೇ ಮರೆಯುತ್ತಿದ್ದನು. ಅವನ ಪವಿತ್ರ ಲೀಲೆ ಗಳನ್ನು ಮನದಲ್ಲಿ ಅನಭವಿಸುತ್ತಾ ಹಾಗೆಯೇ ಮೂರ್ಛಿತನಾಗುವನು. ಒಂದೊಂದು ಸಲ ದೇವರೊಡನೆ ಮಾತಾಡುವನು ; ಒಂದು ಬಾರಿ ನಗುವನು ; ಒಮ್ಮೆ ಅಳುವನು ; ಒಂದು ಬಾರಿ ಗಾನಮಾಡುವನು ; ಒಮ್ಮೆ ಹುಚ್ಚನಂತೆ ಕುಣಿಯುವನು—ಈ ರೀತಿಯ ಲೋಕವಿಲಕ್ಷಣವಾದ ಇವನ ವ್ಯಾಪಾರವನ್ನು

ನೋಡಿ ಇವನಿಗೆ ಹುಚ್ಚು ಹಿಡಿದಿದೆಯೆಂದೇ ಜನರು ಭಾವಿಸಿದ್ದರು. "ರಾಮನೂ, ಕೃಷ್ಣನೂ ತಮ್ಮ ನೆಲೆಯನ್ನು ಬಿಟ್ಟು ಗದಾಧರನ ಹೃದಯ ಮಂದಿರದಲ್ಲಿ ಮನೆ ಮಾಡಿಕೊಂಡು ವಾಸಿಸುತ್ತಿರುವುದು" – ಎಂಬೀ ಅವತಾರ ರಹಸ್ಯವು ಸಾಮಾನ್ಯ ಜನರಿಗೆ ಪಾಪ ಹೇಗೆ ಅರ್ಥವಾಗಬೇಕು ?

ಈ ಮಧ್ಯೆ ರಾಮಕೃಷ್ಣನ ಅಣ್ಣ ರಾಮಕುಮಾರನ ಹೆಂಡತಿ ತೀರಿ ಹೋದಳು. ಮನೆಯಲ್ಲಿ ದರಿದ್ರ ಪಿಶಾಚಿಯ ಕಾಟ ಬೇರೆ. ಈ ಕಾರಣಗಳಿಂದ ರಾಮಕೃಷ್ಣನಿಗೆ ಸಂಸಾರದಲ್ಲಿ ಅಸಾರತೆ ಜುಗುಪ್ಸೆ ಹೆಚ್ಚಿತು. ರಾಮಕುಮಾರನು ಅನಿವಾರ್ಯವಾಗಿ ಜೀವನೋಪಾಯಕ್ಕಾಗಿ ಊರನ್ನು ಬಿಟ್ಟು ಕಲ್ಕತ್ತೆಗೆ ಹೋದನು. ಅಲ್ಲೊಂದು ಸಂಸ್ಕೃತ ಪಾಠಶಾಲೆಯೊಂದನ್ನು ತೆರೆದು, ತಮ್ಮನಿಗೆ ವಿದ್ಯಾಭ್ಯಾಸ ಕಲಿಸಬೇಕೆಂದು ನಿಶ್ಚಯಿಸಿ ರಾಮಕೃಷ್ಣನನ್ನು ಕಳುಹಿಸಿಕೊಡುವಂತೆ ತಾಯಿಗೆ ಕಾಗದ ಬರೆದನು. ಹದಿನಾರನೆಯ ವಯಸ್ಸಿನಲ್ಲಿ ಅಣ್ಣನ ಇಷ್ಟದಂತೆ ರಾಮಕೃಷ್ಣನು ತಾಯಿಯ ಅಪ್ಪಣೆಯನ್ನು ಬೇಡಿ ಕಲ್ಕತ್ತೆಗೆ ಪ್ರಯಾಣ ಮಾಡಿದನು. ತಮ್ಮನ ಆಗಮನದಿಂದ ರಾಮಕುಮಾರನಿಗೇನೊ ಆನಂದವಾಯಿತು. ಆದರೆ ಅವನ ಮನೋರಥದಂತೆ ರಾಮಕೃಷ್ಣ ಹೊಟ್ಟೆ ಪಾಡಿಗೆ ತಾನು ಸಂಪಾದಿಸುವ ವಿದ್ಯೆಯನ್ನು ಅಭ್ಯಾಸಮಾಡಲಿಲ್ಲ. ತರಗತಿಯಲ್ಲಿ ಏನು ಪಾಠ ನಡೆಯುತ್ತಿತ್ತೋ ಅವನಿಗೆ ತಿಳಿಯದು. ರಾಮಕೃಷ್ಣನು ಧ್ರುವ ಚರಿತ್ರೆ - ಪ್ರಹ್ಲಾದ ಚರಿತ್ರೆ ಮುಂತಾದ ಭಗವದ್ಭಕ್ತರ ಕಥೆಯೋದುತ್ತಾ ಕಾಲ ತಳ್ಳುತ್ತಿದ್ದನು.

ಆ ಕಾಲದಲ್ಲಿ ಕಲ್ಕತ್ತೆಯಲ್ಲಿ ಆಗರ್ಭ ಶ್ರೀಮಂತರೆನಿಸಿದ ರಾಯ್‌ರಾಜಾ ಚಂದ್ರರೆಂಬುವರಿಗೆ ದಾನಧರ್ಮಗಳಲ್ಲಿ ಉತ್ಕಟೇಚ್ಛೆಯುಳ್ಳ ರಾಣಿ ರಾಸಮಣಿ ಯೆಂಬ ಭಾರ್ಯೆ ಇದ್ದರು. ಬೆಸ್ತರ ಜಾತಿಗೆ ಸೇರಿದ ರಾಸಮಣಿ ದೇವಿಯವರು ಅಪಾರ ಹಣ ವೆಚ್ಚಮಾಡಿ ಕಲ್ಕತ್ತೆಯಲ್ಲಿ ಕಾಳಿಕಾದೇವಾಲಯವನ್ನು ಕಟ್ಟಿಸಿದರು. ಗುಡಿಯಲ್ಲಿ ದೇವಿಪೂಜೆಗೆ ಸರಿಯಾದ ಆರಾಧಕರು ಯಾರೂ ಬರಲಿಲ್ಲ. ಬೆಸ್ತರು ಕಟ್ಟಿದ ದೇವಾಲಯದಲ್ಲಿ ಬ್ರಾಹ್ಮಣರು ಪೂಜೆಗೆ ಬರಲಾರರೆಂದು ಚಿಂತಿಸಿ ರಾಸಮಣಿಯವರು ಪೂರ್ತಿ ದೇವಸ್ಥಾನದ ಭಾರವನ್ನು ಬ್ರಾಹ್ಮಣರೊಬ್ಬರಿಗೆ ಬಿಟ್ಟುಕೊಡಬೇಕೆಂದು ನಿಶ್ಚಯಿಸಿದರು. ರಾಮಕುಮಾರನು ಈ ವಿಷಯವನ್ನು ತಿಳಿದು ತಮ್ಮನೊಡನೆ ಆ ಕಾಳಿಕಾದೇವಾಲಯದ ಪೂಜಾರಿಯ

ಕೆಲಸಕ್ಕೆ ಒಪ್ಪಿಕೊಂಡನು. ಕ್ರಮವಾಗಿ ರಾಮಕೃಷ್ಣನೇ ದೇವಿಯ ಅರ್ಚಕ ನಾದನು. ರಾಮಕೃಷ್ಣನ ಆರಾಧನೆಯ ವಿಧಾನವೇ ಬೇರೆ. ಗುಡಿಯಲ್ಲಿ ಪ್ರತಿಷ್ಠೆ ಮಾಡಿದ್ದ ಕಲ್ಲಿನ ವಿಗ್ರಹ ಅವನ ಕಣ್ಣಿಗೆ ಸಜೀವವಾಗಿ ಕಂಡಿತು. ಗದಾಧರನು ದೇವಿಗೆ ಕಾಲಿನಿಂದ ಹಿಡಿದು ತಲೆಯವರೆವಿಗೂ ಅಲಂಕಾರಮಾಡಿ ಧ್ಯಾನಾಸಕ್ತನಾಗಿ ಈ ಲೋಕದ ವ್ಯಾಪಾರವನ್ನೇ ಮರೆಯುತ್ತಿದ್ದನು. ಈ ಸಮಯದಲ್ಲೇ ರಾಮಕೃಷ್ಣನ ಬಾಲಮಿತ್ರನೂ, ಬಂಧುವೂ ಆದ ಹೃದಯ ಎಂಬುವನು ಅವನೊಡನೆ ಸೇರಿಕೊಂಡನು. ಗದಾಧರನು ದೇವಿಗೆ ನೈವೇದ್ಯಕ್ಕೆ ಇಟ್ಟು "ಬಹಳ ರುಚಿಯಾಗಿದೆ ಸ್ವಲ್ಪ ಊಟಮಾಡು" ಎಂದು ದೇವಿಯನ್ನು ಬೇಡುತ್ತಾ ಕಣ್ಣುಮುಚ್ಚಿ ಕುಳಿತು ಬಿಡುತ್ತಿದ್ದನು. ಹಗಲು ದೇವೀಪೂಜೆ ರಾತ್ರಿಯಾಗುತ್ತಲೇ ಸಮೀಪದಲ್ಲಿದ್ದ ಕಾಡಿನೊಳಗೆ ಕುಳಿತು ಧ್ಯಾನ–ಈ ವಿಧ ಕಾರ್ಯಗಳಿಂದ ರಾಮಕೃಷ್ಣನ ಆರೋಗ್ಯ ಕೆಟ್ಟಿತು. ಇವನ ಭಕ್ತಿಯ ಉದ್ರೇಕವನ್ನು ಕಂಡು ಹೃದಯನೂ ರಾಸಮಣಿದೇವಿಯೂ ಆಶ್ಚರ್ಯ ಪಟ್ಟರು. ರಾಮಕೃಷ್ಣನ ಭಕ್ತಿಯ ಉದ್ರೇಕದ ಪರಿಣಾಮದಿಂದ ಎಲ್ಲರ ಕಣ್ಣಿಗೂ ಅವನು ಹುಚ್ಚನಂತೆಯೇ ಕಂಡನು. ಈ ವಾರ್ತೆ ಕಾಮಾರಪುಕೂರಿನಲ್ಲಿದ್ದ ತಾಯಿಯ ಕಿವಿಗೂ ಬಿತ್ತು. ತನ್ನ ಮಗನ ಹುಚ್ಚನ್ನು ಪರಿಹರಿಸೆಂದು ಭಗವಂತನನ್ನು ಆಕೆ ಬೇಡಿದಳು. ಶರೀರದ ಆರೋಗ್ಯದ ಕಡೆ ಗಮನ ಕೊಡಬೇಕೆಂದು ಆಪ್ತರು ಪ್ರಾರ್ಥಿಸಲು ವಿಶ್ರಾಂತಿಗಾಗಿ ರಾಮಕೃಷ್ಣನು ಊರಿಗೆ ಬಂದನು.

ಕಲ್ಕತ್ತಾ ನಗರದಿಂದ ಊರಿಗೆ ಬಂದ ತನ್ನ ಮುದ್ದುಕಂದನನ್ನು ನೋಡಿ ತಾಯಿ ಚಂದ್ರಮಣಿದೇವಿ ಬಹಳ ಸಂತೋಷಪಟ್ಟಳು. ಮಗನಿಗೆ ಹಿಡಿದಿರುವ ಹುಚ್ಚು ಹೋಗಲೆಂದು ಯಂತ್ರ ಕಟ್ಟಿಸಿದಳು. ಊಟ ಉಪಚಾರಗಳು ಕಾಲಕ್ಕೆ ಸರಿಯಾಗಿ ನಡೆದುವು. ಇದರಿಂದ ಅವನ ಶಾರೀರಕ ಸ್ಥಿತಿಯು ಉತ್ತಮಗೊಂಡಿತು. ರಾಮಕೃಷ್ಣನಿಗೆ ಮದುವೆಮಾಡಿದರೆ ಇವನ ಹುಚ್ಚು ಪೂರ್ತಿ ಗುಣವಾಗುವುದೆಂದು ಬಂಧುಗಳು ಸಲಹೆ ಮಾಡಿದರು.

ಕಾಮಾರಪುಕೂರಿಗೆ ಸಮೀಪದಲ್ಲಿ ಜಯರಾಮವಟಿಯೆಂಬ ಹಳ್ಳಿ. ಇದು ಬಂಗಾಳದ ಬಂಕೂರು ಜಿಲ್ಲೆಯಲ್ಲಿದೆ. ಈ ಹಳ್ಳಿಯಲ್ಲೆ ರಾಮಚಂದ್ರ ಮುಖರ್ಜಿ – ಶ್ಯಾಮಸುಂದರೀದೇವಿ ಎಂಬ ದಂಪತಿಗಳು ವಾಸಿಸುತ್ತಿದ್ದರು. ಈ ಸದ್ಗೃಹಸ್ಥರ ಮನೆಯಲ್ಲೆ ರಾಮಕೃಷ್ಣರ ಭಾವೀ ಮಡದಿ ಶಾರದಾಮಣಿ

ಬೆಳೆಯುತ್ತಿದ್ದಳು. ಚಂದ್ರಮಣೀದೇವಿ ತನ್ನ ಮಗನಿಗೆ ಆ ವಧುವನ್ನು ತಂದು ಕೊಳ್ಳಲು ಒಪ್ಪಿದರು. ಕ್ರಿ.ಶ. ೧೮೫೯ರಲ್ಲಿ ಗದಾಧರನಿಗೂ – ಶಾರದಾ ಮಣಿಗೂ ವಿವಾಹ ಮಂಗಳವು ನೆರವೇರಿತು. ಚಂದ್ರಮಣಿದೇವಿಯು ಗೃಹಾ ಲಂಕಾರವಾಗಿ ಬಂದ ಪುಟ್ಟ ಸೊಸೆಯನ್ನು ಬಹಳವಾಗಿ ಪ್ರೀತಿಸಿದಳು. ರಾಮಕೃಷ್ಣನು ತಾಯಿಯೊಡನೆ ಎರಡು ವರ್ಷಕಾಲ ಊರಿನಲ್ಲೇ ಕಾಲಕಳೆದನು. ಚಿಕ್ಕವಯಸ್ಸಿನ ಶಾರದೆ ರಾಮಕೃಷ್ಣನಿಗೆ ಶ್ರದ್ಧೆಯಿಂದ ಉಪಚಾರ ಮಾಡಿದಳು.

ಆದರೆ ರಾಮಕೃಷ್ಣನು ಊರಿನಲ್ಲಿ ಬಹಳಕಾಲ ಇರಲು ಇಷ್ಟಪಡಲಿಲ್ಲ. ಅವರು ಪೂಜೆ ಮಾಡುತ್ತಿದ್ದ ಕಾಳಿಕಾದೇವಾಲಯವಿರುವ ಸ್ಥಳ "ದಕ್ಷಿಣೇಶ್ವರ" ಎಂಬ ಪವಿತ್ರ ನಾಮದಿಂದ ಪ್ರಸಿದ್ಧಿ ಪಡೆದಿದೆ. ಪುನಃ ರಾಮಕೃಷ್ಣನು ದಕ್ಷಿಣೇಶ್ವರಕ್ಕೆ ಬಂದನು. ಕಾಳಿಕಾದೇವಿಯ ಪೂಜೆಯಲ್ಲಿ ನಿರತನಾದನು. ಕಾಳಿಕಾ ದೇವಾಲಯಕ್ಕೆ ಕಾಲಿಟ್ಟೊಡನೆ ಊರಿನ ನೆನೆಪೇ ಅವನಿಗೆ ಮರೆತು ಹೋಯಿತು. ಹಠಾತ್ತಾಗಿ ರಾಮಕೃಷ್ಣನಿಗೆ ಭೈರವೀ ಬ್ರಾಹ್ಮಣಿಯೆಂಬ ಸಾಧಕಳ ಸಹವಾಸವೂ ಸಿಕ್ಕಿತು. ಆಕೆ ರಾಮಕೃಷ್ಣನಿಗೆ ಅನೇಕ ಸಾಧನೆ ಗಳನ್ನು ಹೇಳಿಕೊಟ್ಟ ಗುರುಸ್ಥಾನದಲ್ಲಿ ನಿಂತಳು. ರಾಮಕೃಷ್ಣನು ಈ ಸಾಧನೆಗಳನ್ನು ಅಭ್ಯಾಸಮಾಡಿ ಇಂದ್ರಿಯಗಳನ್ನು ಜಯಿಸಿ ಪರಮಹಂಸ ರಾದರು.

ಪರಮಹಂಸರಿಗೆ ತನ್ನ ಚಿಕ್ಕ ಸತಿಯಲ್ಲಿ ವಿಶೇಷ ಪ್ರೇಮವಿತ್ತು. ಶಾರದಾ ಮಣಿಗೂ ಪರಮಹಂಸರಲ್ಲಿ ಪತಿ ಭಾವನೆಗಿಂತ ಗುರು ಭಾವನೆಯೇ ವಿಶೇಷ ವಾಗಿ ಬೆಳೆಯಿತು. ಶಾರದಾಮಣಿ ಅವರ ಪಕ್ಕದಲ್ಲಿ ಕುಳಿತು ಅನೇಕ ಉಪದೇಶಗಳನ್ನು ಪಡೆದಳು. ಈ ಉಪದೇಶದ ಬಲದಿಂದ ಶಾರದಾಮಣಿಯಲ್ಲಿ ಜ್ಞಾನಜ್ಯೋತಿ ಬೆಳಗಿ, ಪರಮಹಂಸರು ನಡೆಸುತ್ತಿದ್ದ ಲೋಕೋಪಕಾರಕ್ಕೆ ಅನುವಾದಳು. ಆಕೆಯೂ ಪತಿಯಂತೆಯೇ ಧನಕನಕ ವಸ್ತು ವಾಹನಗಳಲ್ಲಿ ಆಶೆಯನ್ನು ತ್ಯಜಿಸಿದಳು.

ಭಾರತದ ಸಂಸ್ಕೃತಿಯನ್ನು ವಿಶ್ವದ ಮೂಲೆಮೂಲೆಯಲ್ಲೂ ಪ್ರಚಾರ ಮಾಡಿದ ವಿವೇಕಾನಂದರೂ ಸಹ ಪರಮಹಂಸರ ಆಪ್ತ ಶಿಷ್ಯರಲ್ಲೊಬ್ಬರಾದರು. ರಾಮಕೃಷ್ಣರೊಡನೆ ವಿವೇಕಾನಂದರು ಸೇರಿದ್ದು ಹಾಲಿನಲ್ಲಿ ಸಕ್ಕರೆ ಬೆರೆತಂತಾ ಯಿತು. ಪರಮಹಂಸರ ವೈರಾಗ್ಯವೂ ಅವರ ಉಪದೇಶಾಮೃತವೂ ಜಗತ್ತಿ

ನಲ್ಲಿ ಹರಡಿ ಅವರೆಡೆಗೆ ಅನೇಕ ಶಿಷ್ಯರು ಬರುವಂತಾಯಿತು. ಪರಮಹಂಸರು ಶಿಷ್ಯಮಂಡಲಿಗೆ ಕೇವಲ ಗುರುಗಳೇ ಆಗಿರಲಿಲ್ಲ. ತಂದೆತಾಯಿಯೂ ಬಂಧು ಬಳಗವೂ ಆಪ್ತ ಮಿತ್ರನೂ ಆಗಿ ತ್ಯಾಗ – ಸೇವೆ ಮುಂತಾದ ಸನ್ಮಾರ್ಗದಲ್ಲಿ ಶಿಕ್ಷೆ ಕೊಟ್ಟರು. ಮಾನವ ಸಮೂಹದ ಸೇವೆಗಾಗಿ ಶಿಷ್ಯರೆಲ್ಲರೂ ಪಣತೊಟ್ಟು ನಿಂತರು. ಈ ಶಿಷ್ಯರ ಪೈಕಿ ತ್ಯಾಗ ಮತ್ತು ಸೇವೆಗಳಲ್ಲಿ ಬ್ರಹ್ಮಾನಂದ, ನಾಗ ಮಹಾಶಯ, ಪ್ರೇಮಾನಂದ ಮುಂತಾದವರು ವಿಶೇಷ ಕೀರ್ತಿಗಳಿಸಿದರು.

ಪರಮಹಂಸರಾದ ಶ್ರೀರಾಮಕೃಷ್ಣರು ಪವಿತ್ರ ಗಂಗಾನದಿಯ ದಡದಲ್ಲಿರುವ ದಕ್ಷಿಣೇಶ್ವರದಲ್ಲಿ ಏಳೆಂಟು ವರ್ಷಗಳಕಾಲ ತಪಸ್ಸನ್ನಾಚರಿಸಿದರು. ಜಿತೇಂದ್ರಿಯರಾಗಿ ಪರಬ್ರಹ್ಮನನ್ನು ಸಾಕ್ಷಾತ್ತಾಗಿ ಕಂಡರು. ಯಾವ ಧರ್ಮವನ್ನೂ ಅವರು ದೂಷಣೆ ಮಾಡಲಿಲ್ಲ. ಬೈಬಲ್ಲನ್ನು ಓದಿ ಏಸುವಿನ ಸಾಕ್ಷಾತ್ಕಾರ ಪಡೆದರು. ಕೊರಾನನ್ನು ಓದಿ ಅಲ್ಲಾವನ್ನು ಒಲಿಸಿಕೊಂಡರು. ಗೀತೆಯ ತಿರುಳನ್ನರಿತು ಶ್ರೀಕೃಷ್ಣನ ವಿಶ್ವರೂಪವನ್ನು ಕಂಡರು. ಶ್ರೀರಾಮನನ್ನು ಧ್ಯಾನಿಸುತ್ತಾ ಭಕ್ತ ಹನುಮಂತನಂತೆ ತಾವೂ ಕಪಿಯಂತೆಯೇ ಆಗುತ್ತಿದ್ದರು. ಈ ಮಹಾಪುರುಷನ ಕಣ್ಣಿಗೆ ಕಾಂಚನವು ಮಣ್ಣಿಗೆ ಸಮಾನವಾಗಿದ್ದಿತು. ಪರಮಹಂಸರು ಹಣಕ್ಕಾಗಿ ಪೂಜಾರಿಯ ಕೆಲಸಕ್ಕೆ ಬಂದವರಲ್ಲ. ಕಾಸಿನಾಸೆ ಕಂಡರೆ ಅವರಿಗಾಗದು. ಯಾವ ಮತವನ್ನೂ ನಿರ್ಲಕ್ಷತೆಯಿಂದ ಕಂಡವರಲ್ಲ. ಎಲ್ಲ ಮತಾವಲಂಬಿಗಳೂ ಪರಮಹಂಸರನ್ನು ಗೌರವಿಸುತ್ತಿದ್ದರು. ಅವರು ಸರಸಿಗಳೂ ರಸಿಕರೂ ಆಗಿದ್ದರು. ಆಬಾಲವೃದ್ಧರನ್ನೂ ಆಕರ್ಷಣೆಮಾಡಿ ತಿದ್ದುವ ವಿಲಕ್ಷಣವಾದ ಶಕ್ತಿಯೊಂದು ಅವರಲ್ಲಿ ನೆಲೆಸಿತ್ತು. ಬಡವರೂ – ಶ್ರೀಮಂತರೂ, ಪಾಪಿ – ಪುಣ್ಯವಂತರೂ, ಪಂಡಿತ – ಪಾಮರರೂ ಪರಮಹಂಸರ ದೃಷ್ಟಿಯಲ್ಲಿ ಸರಿಸಮಾನರು. ತಮ್ಮನ್ನು ನೋಡಲು ಯಾರೇ ಬರಲಿ ಅವರನ್ನು ಆದರದಿಂದ ಬರಮಾಡಿಕೊಳ್ಳುವರು. ಅವರಿಗೆ ತಿಂಡಿ ತೀರ್ಥಗಳನ್ನು ಕೊಟ್ಟು ಸತ್ಕರಿಸುವರು. ಸತ್ವ ಗುಣವನ್ನು ಉದ್ರೇಕಮಾಡುವ ಬೆಳಗಿನ ಝಾವದಲ್ಲಿ ಎಲ್ಲರಿಗಿಂತ ಮುಂಚೆ ತಾವು ಎದ್ದು, ಶಿಷ್ಯರನ್ನು ಎಬ್ಬಿಸಿ, ದೇವರನ್ನು ಧ್ಯಾನಿಸುವ ರೀತಿಯನ್ನು ಹೇಳಿಕೊಡುತ್ತಿದ್ದರು. ಲೋಕ ಕಲ್ಯಾಣಕ್ಕಾಗಿಯೇ ಜನಿಸಿದ ಈ ಮಹಾನುಭಾವರ ಗುಣಗಣಗಳನ್ನೂ ಇಷ್ಟೆಂದು ಹೇಳಲು ಸಾಧ್ಯವಿಲ್ಲ. ದೇವಲೋಕದಿಂದ ಹಾರಿಬಂದ ಶ್ರೇಷ್ಠ

ಹಂಸ ಪಕ್ಷಿಯೊಂದು ಕೆಲವು ಕಾಲ ಮಾನವ ಮಧ್ಯದಲ್ಲಿ ಸಂಚರಿಸಿ, ಅವರಿಗೆ ಅನೇಕ ಸದ್ಗುಣಗಳನ್ನು ಕಲಿಸಿ ಜ್ಞಾನದೀಪವಿತ್ತು, ಪುನಃ ಸ್ವಸ್ಥಾನಕ್ಕೆ ಹಾರಿ ಹೋಯಿತು. ಕ್ರಿ ೧೮೮೬ನೆಯ ಆಗಸ್ಟ ೧೫ನೇ ತಾರೀಖು ಕಾಶೀಪುರದ ತೋಟವೊಂದರಲ್ಲಿ ಪರಮಹಂಸರು ಬ್ರಹ್ಮೈಕ್ಯರಾದರು.

# ಶ್ರೀ ವಿವೇಕಾನಂದ

ಶರೀರದ ಬೆಳವಣಿಗೆಗೆ ಹೇಗೆ ಆಹಾರ ವಿಹಾರಗಳು ಅತ್ಯವಶ್ಯವೋ ಹಾಗೆ ಜ್ಞಾನದ ಬೆಳವಣಿಗೆಗೆ "ವಿದ್ಯೆ" ಅತ್ಯವಶ್ಯ. ಗುರೂಪದೇಶವಿಲ್ಲದ ವಿದ್ಯೆ ಸುಸ್ಥಿರವಾಗಿ ನಿಲ್ಲದು, ಅಧ್ಯಾತ್ಮ ವಿದ್ಯೆಯಾದರೋ ಗುರು ಕೃಪೆಯೊಂದರಿಂದಲೇ ಸಾಧ್ಯ. "ಗು" ಎಂದರೆ ಅಂಧಕಾರವೆಂದರ್ಥ. "ರು" ಎಂದರೆ ಅದನ್ನು ಹೋಗಲಾಡಿಸುವುದೆಂದರ್ಥ ಸೂರ್ಯೋದಯವಾದೊಡನೆ ಅಂಧಕಾರವು ಅಡಗುವಂತೆ, ಗುರುಕಟಾಕ್ಷವೊದಗಿದರೆ ಮಾನವನ ಅಜ್ಞಾನಾಂಧಕಾರ ದೂರ ತೊಲಗುವುದು. ವಾಲ್ಮೀಕಿಯು ತನ್ನ ತಪಃಪ್ರಭಾವದಿಂದ ಸ್ವಯಂ ಪ್ರಾಜ್ಞನಾಗಿದ್ದರೂ, ನಾರದರನ್ನು ಗುರುವನ್ನಾಗಿ ವರಿಸಿ ಅನೇಕ ಸಂದೇಹಗಳನ್ನು ಪರಿಹರಿಸಿಕೊಂಡನು. ವಾಲ್ಮಿಕಿಯು ಜಗತ್ತಿಗೆ "ಆದಿಕವಿ "ಯೆಂದು ಪ್ರಸಿದ್ಧನಾದನು, ದ್ರೋಣರ ಪ್ರತಿಮೆಯಲ್ಲಿ ಗುರುಭಾವನೆಯನ್ನಿಟ್ಟು ಏಕಲವ್ಯನು ಧನುರ್ಧಾರಿಗಳಲ್ಲಿ ಮೇಲಾದನು. ಕ್ಷತ್ರಬಂಧುವೆಂಬ ಪಾಪಿಷ್ಠನು ಗುರುವಿನ ಅನುಗ್ರಹದಿಂದ ಭಾಗ್ಯಸಂಪನ್ನನಾದನು. "ಒಂದಕ್ಕರಂ (ವರ್ಣಮಾತ್ರಂ) ಕಲಿಸಿಕೊಟ್ಟಾತಂ ಗುರು" ಎಂಬ ಕವಿವಾಕ್ಯದಂತೆ, ಒಂದಕ್ಷರವನ್ನು ಕಲಿಸಿಕೊಟ್ಟವನೇ ಗುರುವೆಂದು ಘೋಷಿಸಿದ ಮೇಲೆ, ಆತ್ಮೋನ್ನತ್ತಿಗೆ ಕಾರಣನಾದವನು ಗುರು ಮಾತ್ರವೇ ಅಲ್ಲ. ಪ್ರತ್ಯಕ್ಷ ದೇವತೆಯೆಂದು ಆತನನ್ನು ಆರಾಧಿಸಬೇಕು. "ಆಚಾರ್ಯಂ ದೈವಮಿವ ಉಪಾಸೀತ" ಎಂಬುದಾಗಿ ಹಿರಿಯರ ವಾಣಿಯೂ ಉಂಟು. ಹಿಂದಿನ ಕಾಲದಲ್ಲಿ ಈಗಿನಂತೆ ಶಾಲೆಗಳಿರಲಿಲ್ಲ. ವಿದ್ಯಾಭಿಲಾಷಿಯು ಸುಖವನ್ನು ತೊರೆದು ಆಶ್ರಮಗಳಲ್ಲಿ ಏಕಾಂತವಾಗಿ ವಾಸಿಸುತ್ತಿದ್ದ ಮುನಿಗಳನ್ನು ಸೇರಿ ಅವರ ಸೇವೆ ಮಾಡಿ, ವಿದ್ಯಾರ್ಜನೆ ಮಾಡಬೇಕಾಗಿತ್ತು. ಈ ರೀತಿ ವಿದ್ಯಾರ್ಜನೆ ಮಾಡಿದ ಅನೇಕ ಶಿಷ್ಯರು ಸಮಾಜದಲ್ಲಿ ಆದರ್ಶ ವ್ಯಕ್ತಿಗಳಾಗಿ ಹೆಸರು ಪಡೆದಿದ್ದಾರೆ. ಸ್ವಾಮಿ ವಿವೇಕಾನಂದರು ತಮ್ಮ ಗುರುಗಳಾದ

ರಾಮಕೃಷ್ಣ ಪರಮಹಂಸರನ್ನು ಪ್ರತ್ಯಕ್ಷದೇವತೆಯೆಂದು ಆರಾಧಿಸಿದ್ದರಿಂದಲೇ, ಇತಿಹಾಸದಲ್ಲಿ ಅವರ ಹೆಸರು ಅಚ್ಚಳಿಯದೆ ನಿಂತಿದೆ. ಭಾರತದ ಸನಾತನ ಸಂಸ್ಕೃತಿಯನ್ನು ಪರದೇಶಗಳಲ್ಲಿ ಪ್ರವಾಸ ಮಾಡಿ, ಅಲ್ಲಿನ ವಿದ್ವನ್ಮಣಿಗಳ ಸಭೆಯಲ್ಲಿ ಪ್ರಚಾರ ಮಾಡಿ, ಭಾರತದ ಸಂಸ್ಕೃತಿಯ ಹಿರಿಮೆಗಾಗಿ ಪಾಶ್ಚಾತ್ಯರು ಬೆರಗಾಗುವಂತೆ ಮಾಡಿದ ಈ ಮಹನೀಯನನ್ನು ಭಾರತದ ಜನತೆ ಮರೆಯುವಂತಿಲ್ಲ. ಅವರ ಜೀವನ ಚರಿತ್ರೆಯನ್ನು ಮುಂದೆ ಕಂಡಂತೆ ಸಂಗ್ರಹವಾಗಿ ತಿಳಿಸಿದೆ.

ಕ್ಷತ್ರಿಯ ಕುಲಕ್ಕೆ ಸೇರಿದ ವಿಶ್ವನಾಥದತ್ತರು ಕಲ್ಕತ್ತೆಯಲ್ಲಿ ವಕೀಲಿ ವೃತ್ತಿಯಲ್ಲಿದ್ದರು. ಅಪಾರ ಹಣ ಸಂಪಾದಿಸಿದರು. ಸಂಪಾದಿಸಿದ ಹಣವನ್ನು ದರಿದ್ರ ನಾರಾಯಣರ ಸೇವೆಗಾಗಿ ವಿನಿಯೋಗಿಸುತ್ತಿದ್ದರು. ವಿಶ್ವನಾಥರಿಗೆ ದಾನ ಧರ್ಮಗಳಲ್ಲಿ ಅಳತೆಯೇ ಇರಲಿಲ್ಲ ಪ್ರತಿನಿತ್ಯವೂ ಅವರ ಮನೆಯಲ್ಲಿ ಬಡಬಗ್ಗರಿಗೆ ಊಟ ಉಪಚಾರ ನಡೆಯುತ್ತಿದ್ದುದರಿಂದ ಅವರ ಮನೆ ಅನ್ನ ಸತ್ರವೇ ಆಗಿತ್ತು. ದತ್ತರು ಮತ್ತೊಬ್ಬರ ಮನ ನೋಯುವಂತೆ ಮಾತಾಡುತ್ತಿರಲಿಲ್ಲ. ವಕೀಲಿಯ ವೃತ್ತಿಯಲ್ಲಿ ಜನತೆಯ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದರು. ಸಹಜವಾಗಿಯೇ ಅವರ ಕಂಠ ಮಧುರವಾಗಿದ್ದುದರಿಂದ ಅವರಿಗೆ ಸಂಗೀತದ ಅಭ್ಯಾಸವೂ ಇತ್ತು. ಭುವನೇಶ್ವರೀ ದೇವಿಯು ಇಂತಹ ಪತಿಗೆ ಸರಿಯಾದ ಸತಿ. ಅವಳಿಗೂ ಪುರಾಣ, ಹೊಲಿಗೆ, ಸಂಗೀತ ಮುಂತಾದ ವಿದ್ಯೆಗಳಲ್ಲಿ ಪರಿಚಯ. ಬಡವರನ್ನು ಕಂಡರೆ ಬಹಳ ಮರುಕ. ವಿವೇಕಾನಂದರಿಗೆ ಮಾತ್ರವೇ ಈಕೆ ತಾಯಿಯಾಗಿರಲಿಲ್ಲ. ನೆರೆಹೊರೆಯವರಿಗೂ ತಾಯಿಯಾಗಿದ್ದಳು. ಆಕೆಯು ಶುದ್ಧ ಹೃದಯಳೂ, ಸುಸಂಸ್ಕೃತಳೂ, ಸುಶೀಲಳೂ ಸದ್ಗುಣಿಯೂ ಆಗಿದ್ದಳು. ಈ ದಂಪತಿಗಳು ದಯಾ ದಾಕ್ಷಿಣ್ಯಾದಿ ಗುಣಗಳಿಂದ ಕೂಡಿ ವೈರಾಗ್ಯ ಸಂಪನ್ನರಾಗಿದ್ದರು.

ಇಂತಹ ಪವಿತ್ರ ದಂಪತಿಗಳಿಗೆ ಕ್ರಿ. ಶ. ೧೮೬೩ನೆಯ ಇಸ್ವಿ ಜನವರಿ ೧೨ನೆಯ ತಾರೀಖು ಮಕರ ಸಂಕ್ರಾಂತಿಯ ದಿನ ನರೇಂದ್ರನಾಥನು ಜನಿಸಿದನು. ತಾಯಿ ತಂದೆಗಳ ಮುದ್ದು ಕೂಸಾಗಿ ನರೇಂದ್ರನು ಬೆಳೆದನು. ವಿಕಸಿತ ತಾವರೆಯಂತೆ ಪ್ರಸನ್ನವಾದ ಮುಖ, ಅಗಲವಾದ ಕಣ್ಣು,

ಮುಖದಲ್ಲಿ ಅಲೌಕಿಕವಾದ ದಿವ್ಯ ತೇಜಸ್ಸು, ತುಂಬಿಕೊಂಡ ಅವಯವ ಈ ಮಗುವಿನ ಲಕ್ಷಣವಾಗಿತ್ತು. 'ತಂದೆಯಂತೆ ಮಗ' ಎಂಬ ನಾಣ್ಣುಡಿಗೆ ತಕ್ಕಂತೆ ತಾಯಿತಂದೆಗಳ ಸದ್ಗುಣಗಳು ಮಗನ ಮನದಲ್ಲಿ ಮನೆ ಮಾಡಿಕೊಂಡವು. ಭಿಕ್ಷುಕರು ಮನೆಗೆ ಬಂದರೆ ನರೇಂದ್ರನು ಮನೆಯಲ್ಲಿರುವುದನ್ನು ಬಾಚಿಕೊಡುತ್ತಿದ್ದನು. ಸನ್ಯಾಸಿಗಳನ್ನು ಕಂಡರೆ ಅವನಿಗೆ ಬಹಳ ಪ್ರೀತಿ. ದೂರದಲ್ಲಿ ಭಿಕ್ಷುಕರಾಗಲೀ ಸನ್ಯಾಸಿಗಳಾಗಲೀ ಬರುತ್ತಿದ್ದುದನ್ನು ಕಂಡರೆ ತಾಯಿ ನರೇಂದ್ರನನ್ನು ಒಂದು ಕೋಣೆಯಲ್ಲಿ ಕೂಡಿ ಹಾಕುತ್ತಿದ್ದಳು. ಆದರೂ ನರೇಂದ್ರನು ಕಿಟಕಿಯ ಮೂಲಕವೇ ಕೋಣೆಯಲ್ಲಿ ಬಟ್ಟೆ ಬರೆಗಳನ್ನು ಅವರಿಗೆ ಕೊಟ್ಟುಬಿಡುತ್ತಿದ್ದನು. ಬಾಲ್ಯದಲ್ಲಿ ಬಹಳ ತುಂಟತನಕ್ಕೆ ಪ್ರಸಿದ್ಧಿಯಾಗಿದ್ದನು. ನರೇಂದ್ರನು ಬೆಳೆದಂತೆ ಕುಣಿತ, ಗರಡಿ, ಈಜು, ಓಡುವುದರಲ್ಲಿ ಎಲ್ಲರನ್ನೂ ಮೀರಿಸಿದನು. ಕಳೆಕಳೆಯಾದ ಮುಖಕ್ಕೆ ತಕ್ಕಂತೆ ಅವನ ಧ್ವನಿಯೂ ಮಧುರವೂ ಗಂಭೀರವೂ ಆಗಿತ್ತು. ಹಿಂದೂ ಮತ್ತು ಮಹಮ್ಮದೀಯ ಎರಡು ಭಾಷೆಗಳಲ್ಲಿಯೂ ಅವನ ಸಂಗೀತವನ್ನು ಅಭ್ಯಾಸ ಮಾಡಿ ಮಧುರವಾಗಿ ಹಾಡುತ್ತಿದ್ದನು. ಅವನಿಗೆ ಮೂಕ ಜೀವಿಗಳಲ್ಲಿಯೂ ಬಹಳ ಪ್ರೀತಿ. ಮನೆಯಲ್ಲಿದ್ದ ಹಸುವನ್ನು ಅವನು ಚೆನ್ನಾಗಿ ಸಾಕಿದ್ದನು. ಇದರ ಜೊತೆಗೆ ನವಿಲು, ಪಾರಿವಾಳ ಮೇಕೆ ಅವನ ಪರಿವಾರವಾಗಿದ್ದುವು.

ನರೇಂದ್ರನ ವಿದ್ಯಾಭ್ಯಾಸ ತಾಯಿಯ ಬಳಿಯಲ್ಲಿಯೇ ಮೊದಲು ಆರಂಭವಾಯಿತು. ತಾಯಿಯು ಮಗನನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಪುರಾಣ ಪುಣ್ಯಕಥೆಗಳನ್ನು ಹೇಳುತ್ತಾ, ರಾಮ, ಕರ್ಣ, ಭೀಷ್ಮ ಮುಂತಾದ ಆದರ್ಶ ವ್ಯಕ್ತಿಗಳ ಚಿತ್ರವನ್ನು ಮಗನ ಮನಸ್ಸಿನಲ್ಲಿ ನಿಲ್ಲುವಂತೆ ವಿವರಿಸುತ್ತಿದ್ದಳು. ಕ್ರಮೇಣ ನರೇಂದ್ರನು ಶಾಲೆಗೂ ಸೇರಿದನು. ಚಿಕ್ಕ ವಯಸ್ಸಿನ ನರೇಂದ್ರ ಶಾಲೆಯಲ್ಲಿ ಕೆಟ್ಟ ಬಯ್ಗುಗಳನ್ನು ಕಲಿತು ಅದರ ಅರ್ಥ ತಿಳಿಯದೆ ಮನೆಯಲ್ಲೂ ಪ್ರಯೋಗಿಸುತ್ತಿದ್ದನು. ಆದರೆ ಈ ರೀತಿಯ ಮನೋವೃತ್ತಿ ಅವನಲ್ಲಿ ಬಹಳ ಕಾಲ ನಿಲ್ಲಲಿಲ್ಲ. ತರಗತಿಯಲ್ಲಿ ಸಂಗಡಿಗರು ಅಕ್ಷರ ತಿದ್ದುತ್ತಿರಲು, ಇವನು ಓದುವುದನ್ನೂ ಬರೆಯುವುದನ್ನೂ ಕಲಿತು ಇತರರಿಗಿಂತ ಮುಂದಾದನು. ಅವನು ತನ್ನ ಏಳನೆಯ ವಯಸ್ಸಿನಲ್ಲಿ ಪಂಡಿತ ಈಶ್ವರ ಚಂದ್ರ ವಿದ್ಯಾಸಾಗರರ ಮೆಟ್ರೋಪಾಲಿಟನ್ ಇನ್‌ಸ್ಟಿಟ್ಯೂಟಿಗೆ ಸೇರಿ ವಿದ್ಯಾಭ್ಯಾಸ ಮುಂದುವರೆಸಿದನು. ಈ ವಯಸ್ಸಿನಲ್ಲಿಯೇ ಅವನು ಸಾಕಷ್ಟು

ಸಂಸ್ಕೃತ ವ್ಯಾಕರಣವನ್ನು ಕಂಠಪಾಠ ಮಾಡಿದ್ದನು. ಶಾಲೆಯಲ್ಲಿ ಉಪಾಧ್ಯಾಯರು ಕೇಳುವ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಕೊಡು ತ್ತಿದ್ದನು ಅವನ ವಿದ್ಯಾಭ್ಯಾಸ ಯಾವ ತರಗತಿಯಲ್ಲಿಯು ಕುಂಟದೆ ಸಾಗಿ, ಹೈಸ್ಕೂಲಿನ ವಿದ್ಯಾಭ್ಯಾಸ ಮುಂದುವರೆಯಿತು. ನರೇಂದ್ರನ ಬುದ್ಧಿ ಅತಿಸೂಕ್ಷ್ಮ. ಉಪಾಧ್ಯಾಯರ ಬಾಯಿಂದ ಬಂದ ಮಾತ್ರದಿಂದಲೇ ಅದನ್ನು ನಂಬುತ್ತಿರಲಿಲ್ಲ. ಸ್ವಬುದ್ಧಿಯಿಂದ ಚಿಂತಿಸಿ, ಪರಿಶೀಲಿಸಿ ಒಂದು ಸಿದ್ಧಾಂತಕ್ಕೆ ಬರುತ್ತಿದ್ದನು. ಹಿಂದಿನಿಂದ ಬಂದ ಕೆಲವು ಕಂದಾಚಾರಗಳನ್ನು ಅವನು ನಂಬುತ್ತಿರಲಿಲ್ಲ. ತನ್ನ ಮಿತ್ರನೊಬ್ಬನ ಮನೆಯಲ್ಲಿ ಅಪಾರ ಹಣ್ಣು ಬಿಡುವ ಮರವೊಂದಿತ್ತು. ಮಕ್ಕಳು ಹಣ್ಣು ದಿರಿಸಿಯಾರೆಂದು ಮನೆಯ ಯಜಮಾನನು ಅದರಲ್ಲಿ ಬ್ರಹ್ಮರಾಕ್ಷಸನೆಂಬ ಪಿಶಾಚಿಯಿದೆಯೆಂದು ಬೆದರಿಕೆ ತಂದೊಡ್ಡಿದನು. ಇತರ ಮಕ್ಕಳು ಅದು ನಿಜವೆಂದು ನಂಬಿ ಆ ಮರದ ಹತ್ತಿರ ಸುಳಿಯುತ್ತಿರಲಿಲ್ಲ. ಆದರೆ ನರೇಂದ್ರ ನಂಬಲಿಲ್ಲ. ಧೈರ್ಯದಿಂದ ಮರ ಹತ್ತಿ ಯಥೇಚ್ಛವಾಗಿ ಹಣ್ಣು ಹಂಪಲು ತಂದು ಮಕ್ಕಳಿಗೆ ಹಂಚಿದನು. ನರೇಂದ್ರನು ಬಾಲ್ಯದಿಂದಲೂ ಬಹಳ ಧೈರ್ಯಶಾಲಿ. ಒಂದು ಬಾರಿ ಅವನು ತನ್ನ ಗೆಳೆಯರೊಡನೆ ಕೆಲವು ಊರುಗಳ ಪ್ರವಾಸ ಮುಗಿಸಿಕೊಂಡು ಊರಿನ ಕಡೆಗೆ ಹಿಂದಿರುಗುತ್ತಿದ್ದನು. ಅಡ್ಡಲಾದ ನದಿಯನ್ನು ದೋಣಿಯ ಮೂಲಕ ದಾಟುತ್ತಿದ್ದರು. ದೋಣಿಯವನು ಹೇಳಿದ ಬಾಡಿಗೆಗಿಂತ ಜಾಸ್ತಿ ಬಾಡಿಗೆ ಕೊಡಬೇಕೆಂದು ಪೀಡಿಸಲಾರಂಭಿಸಿದನು. ನರೇಂದ್ರನಿಗೆ ಇದು ನ್ಯಾಯವಾಗಿ ಕಾಣಲಿಲ್ಲ. ಕೂಡಲೆ ಅವನು ದೋಣಿಯಿಂದ ಧುಮುಕಿ, ಸಮೀಪದಲ್ಲೇ ಹೋಗುತ್ತಿದ್ದ ಇಬ್ಬರು ಇಂಗ್ಲೀಷ್ ಸಿಪಾಯಿಗಳನ್ನು ತನಗೆ ನೆರವು ನೀಡ ಬೇಕೆಂದು, ತನಗೆ ಬರುತ್ತಿದ್ದ ಅರ್ಧಂಬರ್ಧ ಇಂಗ್ಲೀಷ್ ಭಾಷೆಯಲ್ಲೇ ಪ್ರಾರ್ಥಿಸಿದನು. ಹುಡುಗನ ಧೈರ್ಯ ಸಾಹಸವನ್ನು ಕಂಡ ಆ ಸಿಪಾಯಿಗಳು ಅವನ ಕೋರಿಕೆಯಂತೆ ದೋಣಿಯ ಹತ್ತಿರ ಬಂದರು. ಸಿಪಾಯಿಗಳು ಬಂದುದೇ ತಡ, ದೋಣಿಯವನು ಹೆದರಿ ಇತರ ಮಕ್ಕಳನ್ನು ಇಳಿಸಿ ಆ ಸ್ಥಳದಿಂದ ಮೆಲ್ಲಗೆ ಜಾರಿದನು. ಸಿಪಾಯಿಗಳನ್ನು ಕಂಡರೆ ಯಮಕಿಂಕರರೇ ಬಂದರೆಂದು ಹೆದರುತ್ತಿದ್ದ ಆ ಕಾಲದಲ್ಲಿ ಚಿಕ್ಕ ನರೇಂದ್ರನು ನಿರ್ಭಯವಾಗಿ ಅವರೊಡನೆ ಮಾತಾಡುತ್ತಿದ್ದನು.

ನರೇಂದ್ರನು ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿ, ವಿಶ್ವವಿದ್ಯಾನಿಲಯದ

ಪ್ರವೇಶಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ಉತ್ತೀರ್ಣನಾದನು. ಈ ಕಾಲದಲ್ಲಿ ಅವನು ಇಂಗ್ಲೀಷ್ ಮತ್ತು ಬಂಗಾಳೀ ಸಾಹಿತ್ಯವನ್ನು ಚೆನ್ನಾಗಿ ವ್ಯಾಸಂಗ ಮಾಡಿದನು. ವಿಶ್ವದ ಅನೇಕ ಸಾಹಿತ್ಯಗಳ ಪರಿಚಯ ಮಾಡಿಕೊಂಡನು. ಸಂಸ್ಕೃತ ಸಾಹಿತ್ಯದ ರುಚಿಯನ್ನೂ ಅನುಭವಕ್ಕೆ ತಂದುಕೊಂಡನು. ಪ್ರವೇಶ ಪರೀಕ್ಷೆಯಾದೊಡನೆ ನರೇಂದ್ರನು ಕಾಲೇಜಿಗೆ ಸೇರಿದನು. ಆಗ ಕಲ್ಕತ್ತೆಯಲ್ಲಿ ಮಹರ್ಷಿ ದೇವೇಂದ್ರನಾಥರು ಬ್ರಹ್ಮ ಸಮಾಜವನ್ನು ಸ್ಥಾಪಿಸಿದ್ದರು. ಅನೇಕ ಯುವಕರು ಆ ಸಮಾಜಕ್ಕೆ ಹೋಗಿ ಬರುತ್ತಿದ್ದರು. ಆ ಸಮಾಜವು ಜ್ಞಾನಪಿಪಾಸುಗಳಿಗೆ ಅಮೃತ ಧಾರೆಯನ್ನೆರೆದು ತೃಪ್ತಿಯನ್ನುಂಟು ಮಾಡುತ್ತಿತ್ತು. ಪ್ರಾಪ್ತ ವಯಸ್ಸಿಗೆ ಕಾಲಿಟ್ಟ ನರೇಂದ್ರನೂ ಆ ಸಮಾಜಕ್ಕೆ ಹೋಗಿಬರಲು ಪ್ರಾರಂಭಿಸಿದ. ನರೇಂದ್ರ ಮೊದಲಿಂದಲೂ ಕೇವಲ ಶಾಲಾ ಪುಸ್ತಕಗಳನ್ನು ಓದುವುದರಲ್ಲಿ ಮಾತ್ರವೇ ತನ್ನ ಬುದ್ಧಿಯನ್ನು ವಿನಿಯೋಗಿಸಿರಲಿಲ್ಲ. ಬುದ್ಧಿಯನ್ನು ತನ್ನಧೀನದಲ್ಲಿಟ್ಟು ದೇವರ ಧ್ಯಾನದಲ್ಲಿಯೂ ವಿನಿಯೋಗಿಸಿದ್ದ. ಶ್ರೀರಾಮಮೂರ್ತಿಯನ್ನು ಕಂಡರೆ ಅವನು ತನ್ನನ್ನೇ ಮರೆಯುತ್ತಿದ್ದನು. ಅವನ ಸಂಗಡ ರಾಮ ಮೂರ್ತಿಯ ವಿಗ್ರಹವೊಂದಿತ್ತು. ಆಗಾಗ್ಯೆ ಆ ವಿಗ್ರಹದಲ್ಲಿ ನೆಟ್ಟ ದೃಷ್ಟಿಯಿಟ್ಟು ಘಂಟೆಗಳಕಾಲ ಧ್ಯಾನ ಹೋಗುತ್ತಿದ್ದನು. ಬ್ರಹ್ಮ ಸಮಾಜಕ್ಕೆ ಬಂದ ನರೇಂದ್ರನನ್ನು ಪರೀಕ್ಷಿಸಿ, ಅಲ್ಲಿನ ದೇವೇಂದ್ರನಾಥರು ಅವನಿಗೆ ಧ್ಯಾನ ಮಾಡುವುದರಲ್ಲಿ ಮತ್ತಷ್ಟು ಶಿಕ್ಷೆ ಕೊಟ್ಟರು. ಒಂದು ದಿನ ಅವನು ತನ್ನ ಮಿತ್ರರಿಗೂ ಧ್ಯಾನ ಮಾಡುವುದನ್ನು ಕಲಿಸಿಕೊಟ್ಟು ಎಲ್ಲರೂ ಧ್ಯಾನಕ್ಕೆ ಕುಳಿತರು. ಸ್ವಲ್ಪ ಹೊತ್ತಿನಲ್ಲೇ ನಾಗರ ಹಾವುವೊಂದು ಕಾಣಿಸಿಕೊಂಡಿತು. ಸ್ನೇಹಿತರೆಲ್ಲರೂ ಹೆದರಿ ಓಡಿಹೋದನು. ನರೇಂದ್ರ ಕೂತ ಸ್ಥಳದಿಂದ ಕದಲಲಿಲ್ಲ. ಮಿತ್ರರು ಕೂಗಿದರೂ ಅವನಿಗೆ ಎಚ್ಚರವಿಲ್ಲ. ಅವನು ಬಹಿರ್ಮುಖನಾದ ಮೇಲೆ " ಗೆಳೆಯರು ಕೇಳಿದರು ನಿನಗೆ ಹಾವು ಕಾಣಿಸ ಲಿಲ್ಲವೆ ?" ಎಂದು. ನರೇಂದ್ರನು ಹೇಳಿದನು. " ನಾನು ಹಾವನ್ನು ಕಾಣಲಿಲ್ಲ, ನನ್ನ ಮನಸ್ಸು ಅಲೌಕಿಕವಾದ ಆನಂದಾಬ್ಧಿಯಲ್ಲಿ ಮುಳುಗಿತ್ತು " ಎಂಬುದಾಗಿ.

ವಿಶ್ವನಾಥದತ್ತರು ಪ್ರೌಢವಯಸ್ಸಿಗೆ ಬಂದ ತನ್ನ ಮಗನಿಗೆ ಅನುರೂಪ ಳಾದ ವಧುವನ್ನು ತರಬೇಕೆಂದು ಪ್ರಯತ್ನಪಟ್ಟರು. ತಾಯಿ ಪುಟ್ಟಸೊಸೆ

ಮನೆಯಲ್ಲಿ ಓಡಾಡುವ ದಿನ ನಿರೀಕ್ಷಿಸುತ್ತಿದ್ದಳು. ನರೇಂದ್ರನು ಮದುವೆ ಯಾಗುವುದಿಲ್ಲವೆಂದು ಹಠಮಾಡಿದ್ದರಿಂದ ತಂದೆ – ತಾಯಿಗಳ ವಿವಾಹ ಪ್ರಯತ್ನ ನಿಂತು ಹೋಯಿತು. ನರೇಂದ್ರನು ಆಜನ್ಮ ಬ್ರಹ್ಮಚಾರಿಯಾಗಿ, ಭೀಷ್ಮರಂತೆ ಜೀವಪರ್ಯಂತ ಬಾಳಿದನು. ನರೇಂದ್ರನು ಕಾಲೇಜಿನಲ್ಲಿ ಆಟ–ಪಾಠ ಗಳಲ್ಲಿ ಎಲ್ಲರಿಗೂ ಮುಂದಾಗಿ ತನ್ನ ವ್ಯಾಸಂಗ ಮುಂದುವರಿಸಿದನು. ಕಾಲೇಜಿ ನಲ್ಲಿ ಪ್ರೊಫೆಸರ್ ವಿಲಿಯಂ ಹೇಸ್ಟಿಯವರ ಬಾಯಿಂದ ನರೇಂದ್ರನು ಮೊತ್ತ ಮೊದಲು ರಾಮಕೃಷ್ಣರ ಹೆಸರನ್ನು ಕೇಳಿದನು. ಹೇಸ್ಟಿಯವರು ನರೇಂದ್ರನ ಬುದ್ಧಿಶಕ್ತಿಗೆ ಮೆಚ್ಚಿ, ಇವನು ಮುಂದೆ ಪ್ರಸಿದ್ಧಿಗೆ ಬರುವ ವಿದ್ಯಾರ್ಥಿಯೆಂದು ಆಗಾಗ್ಗೆ ಹೇಳುತ್ತಿದ್ದರು. ವಿದ್ಯಾಭ್ಯಾಸದ ಸಂಗಡ ಅವನು ಧ್ಯಾನ ಮಾಡು ವುದನ್ನೂ ಕಲಿತನು. ಅವನ ಹೃದಯದಲ್ಲಿ ಒಂದು ಪ್ರಶ್ನೆ ಕಾಡುತ್ತಿತ್ತು "ದೇವರಿದ್ದಾನೆಯೇ? ಇದ್ದರೆ ಆವನು ಏಕೆ ಕಣ್ಣಿಗೆ ಕಾಣಿಸುವುದಿಲ್ಲ?" ಎಂದು ಅನೇಕ ವೇಂದಾಂತಿಗಳನ್ನು ಸಮೀಪಿಸಿ ನೀವು ದೇವರನ್ನು ನೋಡಿರು ವಿರಾ? ಎಂಬುದಾಗಿ ಪ್ರಶ್ನೆಯನ್ನೂ ಮಾಡಿದನು. ಯಾರಿಂದಲೂ ಸಮರ್ಪಕ ವಾದ ಉತ್ತರ ದೊರೆಯಲಿಲ್ಲ.

ಕಾಲೇಜು ವಿದ್ಯಾಭ್ಯಾಸ ಮುಗಿಯಿತು. ಹೇಗಾದರೂ ಭಗವಂತನನ್ನು ನೋಡಬೇಕೆಂಬ ಬಯಕೆ ನರೇಂದ್ರನಿಗೆ ದಿನದಿನಕ್ಕೆ ಹೆಚ್ಚಿತು. ನರೇಂದ್ರನ ಈ ರೀತಿಯ ಬಯಕೆಯನ್ನು ನೋಡಿ ಆತನ ಸೋದರಮಾವ ರಾಮಚಂದ್ರ ದತ್ತನೆಂಬುವನು "ನೀನು ನಿಜವಾಗಿ ಆತ್ಮ ವಿಚಾರವನ್ನು ತಿಳಿಯಬೇಕಾದರೆ ದಕ್ಷಿಣೇಶ್ವರದಲ್ಲಿರುವ ರಾಮಕೃಷ್ಣ ಪರಮಹಂಸರಲ್ಲಿಗೆ ಹೋಗು" ಎಂದು ಸೂಚಿಸಿದರು. ನರೇಂದ್ರನು ಮಿತ್ರವೃಂದದೊಡನೆ ದಕ್ಷಿಣೇಶ್ವರಕ್ಕೆ ಪ್ರಯಾಣ ಮಾಡಿದನು. ರಾಮಕೃಷ್ಣರ ಕೋಣೆಯನ್ನು ನರೇಂದ್ರನು ಪ್ರವೇಶಿಸಿದನು. ರಾಮಕೃಷ್ಣರ ಅಪ್ಪಣೆಯಂತೆ ನರೇಂದ್ರನೂ ಅವನ ಗೆಳೆಯರೂ ಚಾಪೆಯ ಮೇಲೆ ಕುಳಿತು ಸ್ವಲ್ಪ ಕಾಲ ವಿಶ್ರಮಿಸಿಕೊಂಡರು. ರಾಮಕೃಷ್ಣರು ತೇಜಃಪುಂಜವಾದ ನರೇಂದ್ರನ ಮುಖವನ್ನು ನೋಡಿ ತಾವು ಸಾಧಿಸಿದ ತತ್ವ ವನ್ನು ಅವನಿಗೆ ಉಪದೇಶಿಸುವುದೆಂದು ನಿಶ್ಚಯಿಸಿದರು. ನರೇಂದ್ರನಿಗೆ ಕೆಲವು ಭಗವನ್ನಾಮಗಳನ್ನು ಗಾನಮಾಡುವಂತೆ ಪರಮಹಂಸರು ಸೂಚಿಸಿದರು. ನರೇಂದ್ರನು ಕೆಲವು ಬಂಗಾಳೀ ಗೀತೆಗಳನ್ನು ತನ್ನ ಕೋಮಲವಾದ ಕಂಠದಲ್ಲಿ ಹೃದಯದಲ್ಲಿ ಅಡಗಿದ್ದ ಭಕ್ತಿರಸವನ್ನು ಹೊರ ಚೆಲ್ಲುವಂತೆ ಹಾಡಿದನು.

ಗಾನವನ್ನು ಕೇಳಿ ಪರಮಹಂಸರು ತುಸು ಹೊತ್ತು ಭಾವಪರವಶರಾದರು. ನಂತರ ರಾಮಕೃಷ್ಣರು ನರೇಂದ್ರನ ಕೈ ಹಿಡಿದುಕೊಂಡು ಹೊರಗೆ ಕರೆದುಕೊಂಡು ಹೋಗಿ, ಬಹಳ ಕಾಲದಿಂದ ತಮಗೂ ಅವನಿಗೂ ಬಾಂಧವ್ಯವಿರುವ ಹಾಗೆ ಮಾತಾಡುತ್ತಾ ಬಿಕ್ಕಿ ಬಿಕ್ಕಿ ಅತ್ತರು. ತಮ್ಮ ಕೊಠಡಿಯಿಂದ ಮಿಠಾಯಿ ಬೆಣ್ಣೆ, ಸಕ್ಕರೆ ತಂದು ನರೇಂದ್ರ ಬೇಡವೆಂದರೂ ಬಲಾತ್ಕಾರವಾಗಿ ತಿನ್ನಿಸಿದರು. ನರೇಂದ್ರನ ಗೆಳೆಯರಿಗೂ ಪರಮಹಂಸರು ತಿಂಡಿ ತೀರ್ಥಗಳನ್ನು ಕೊಟ್ಟು ಸತ್ಕರಿಸಿದರು. ರಾಮಕೃಷ್ಣರ ವರ್ತನೆಯನ್ನು ನೋಡಿ ನರೇಂದ್ರನು ಅವರು ಹುಚ್ಚರೆಂದೇ ಭಾವಿಸಿದ್ದನು. ಆದರೆ ನರೇಂದ್ರನ ಹೃದಯದಲ್ಲಿದ್ದ ಪ್ರಶ್ನೆಗೆ ಅವರು ಉತ್ತರ ಕೊಟ್ಟಿದ್ದು ವಿಚಿತ್ರವಾಗಿ ಕಾಣಿಸಿತು. ನರೇಂದ್ರನು ತನ್ನ ಸಂದೇಹವನ್ನು ಅವರ ಮುಂದಿಡುವುದಕ್ಕೆ ಮುಂಚೆಯೇ “ಅವರು ನಾವು ಸಮಾಜದಲ್ಲಿದ್ದುಕೊಂಡೇ ದೇವರನ್ನು ಕಾಣಬಹುದು, ಅವನೊಡನೆ ಮಾತಾಡಬಹುದು, ಆದರೆ ನಿಜವಾಗಿ ಮಾನವನಿಗೆ ದೇವರನ್ನು ಕಾಣಬೇಕೆಂಬ ಇಚ್ಛೆ ಹುಟ್ಟಿಲ್ಲ. ಜಗತ್ತಿನಲ್ಲಿ ಜನರು ಹೆಂಡತಿ ಮಕ್ಕಳು ಆಸ್ತಿಗಳನ್ನು ಪ್ರೀತಿಸುತ್ತಾರೆ, ಅದಕ್ಕಾಗಿ ದುಃಖಿಸುತ್ತಾರೆ. ದೇವರನ್ನು ಪ್ರೀತಿಸುವ ಮಂದಿ ಎಲ್ಲಿರುವರು ? ಅವನನ್ನು ನಿಜವಾಗಿ ಪ್ರೀತಿಸುವುದಾದರೆ ಅವನಿಗಾಗಿ ದುಃಖಪಡುವುದಾದರೆ ಅವನು ಆಗ ತನ್ನ ರೂಪವನ್ನು ತೋರುತ್ತಾನೆ.” ಎಂದು ಪರಮಹಂಸರ ಈ ಮಾತು ನರೇಂದ್ರನ ಹೃದಯದಲ್ಲಿ ವಿಶೇಷ ಪರಿಣಾಮವನ್ನುಂಟುಮಾಡಿತು. ಮೊದಮೊದಲು ಅವರನ್ನು ಹುಚ್ಚನೆಂದು ತಿಳಿದಿದ್ದ ನರೇಂದ್ರನು ಅವರನ್ನು ಪರಮಯೋಗಿಯೆಂದು ಭಾವಿಸಿ ಗೌರವಿಸಿದನು. ಅವರಲ್ಲಿಗೆ ಆಗಾಗ್ಯೆ ಹೋಗಿ ಬರಲು ಪ್ರಾರಂಭಿಸಿದನು.

ಅಧ್ಯಾತ್ಮಚಿಂತನೆಯಲ್ಲಿ ತೊಡಗಿದ್ದ ನರೇಂದ್ರನು ವಿಧಿವಿಲಾಸದಿಂದ ಸಂಸಾರದ ಕಷ್ಟನಿಷ್ಠೂರಗಳನ್ನು ಎದುರಿಸಬೇಕಾಗಿ ಬಂತು. ನರೇಂದ್ರನ ತಂದೆ ವಿಶ್ವನಾಥದತ್ತರು ಕ್ರಿ. ಶ. ೧೮೮೪ ರಲ್ಲಿ ಹೃದ್ರೋಗದಿಂದ ನಿಧನರಾದರು. ಮನೆಯಲ್ಲಿ ಸಂಪಾದಿಸುವ ವ್ಯಕ್ತಿ ಮಾಯವಾದ್ದರಿಂದ ದತ್ತರ ಸಂಸಾರ ಕಠಿಣವಾದ ದಾರಿದ್ರ್ಯಕ್ಕೀಡಾಯಿತು. ಅಪಾರ ಹಣ ಗಳಿಸಿದ್ದರೂ ತ್ಯಾಗಮಾಡಿ ಬರಿದಾಗಿದ್ದಿತು. ದತ್ತರ ಬಂಧುಗಳು ಅವರಿದ್ದ ಕಾಲದಲ್ಲಿ ಅವರಿಂದ ಉಪಕಾರ ಪಡೆದು ತೃಪ್ತಿಯಾಗಿ ಊಟಮಾಡಿದ್ದರೂ ಈ ಸಮಯದಲ್ಲಿ ನರೇಂದ್ರನನ್ನು ಯಾರೂ ಮಾತಾಡಿಸಲಿಲ್ಲ. ಬಡತನದ ಬೇಗೆ, ಬೆಳಿಗ್ಗೆ ಸಂಜೆ ಸಾಲಗಾರರ

ಕಾಟ, ನರೇಂದ್ರನಿಗೆ ದೊಡ್ಡ ಸಮಸ್ಯೆ ಇಟ್ಟುಕೊಂಡಿತು. ಏಳೆಂಟು ಮಂದಿಯನ್ನು ಕಾಪಾಡುವ ಭಾರ ನರೇಂದ್ರನ ಮೇಲೆ ಬಿತ್ತು. ಸಾಲಕ್ಕಾಗಿ ವಾಸಮಾಡುತ್ತಿದ್ದ ಮನೆಯೂ ಹೋಯಿತು. ನರೇಂದ್ರನು ಅಕ್ಕತಂಗಿಯರ ಮತ್ತು ಸಹೋದರ ರಕ್ಷಣೆಗಾಗಿ ನೌಕರಿಯನ್ನು ಹುಡುಕಲು ಅಲೆದನು. ನೌಕರಿ ಸಿಗಲಿಲ್ಲ. ಸ್ನೇಹಿತರಿಂದ ಅಲ್ಪ ಸ್ವಲ್ಪ ಸಿಕ್ಕಿದ್ದನ್ನು ಮನೆಗೆ ಕೊಟ್ಟು ತಾನು ಎಷ್ಟೋ ದಿನ ಉಪವಾಸದಿಂದಿರುತ್ತಿದ್ದನು. ಈ ದಾರುಣ ಪರಿಸ್ಥಿತಿಯಲ್ಲಿ ನರೇಂದ್ರನಿಗೆ ತನ್ನ ಗುರು ರಾಮಕೃಷ್ಣರ ನೆನಪಾಯಿತು. ಅವರಲ್ಲಿಗೆ ಹೋಗಿ "ತನ್ನ ತಾಯಿ ಅಕ್ಕತಂಗಿ ಸಹೋದರರಿಗೆ ತಿನ್ನುವುದಕ್ಕಿಲ್ಲ. ವಾಸಕ್ಕೆ ಮನೆಯಿಲ್ಲ" ಈ ದಾರಿದ್ರ್ಯನಿವಾರಣೆಗಾಗಿ ತಾವು ದೇವಿಯಲ್ಲಿ ಪ್ರಾರ್ಥಿಸಬೇಕೆಂದು ಬೇಡಿದನು. ತಾಯಿಯ ಬಳಿ ಐಹಿಕ ಸುಖವನ್ನು ಬೇಡಲು ಗುರುಗಳೂ ಒಪ್ಪಲಿಲ್ಲ. ನರೇಂದ್ರನನ್ನೇ ತಾಯಿಯ ಬಳಿ ಬೇಡುವಂತೆ ಒಳಕ್ಕೆ ಕಳುಹಿಸಿದರು. ನರೇಂದ್ರ ಒಳಕ್ಕೆ ಹೋಗಿ ದೇವಿಗೆ ಅಡ್ಡಬಿದ್ದು ಬೇಡಿದ್ದು "ತಾಯೇ! ಜ್ಞಾನಭಕ್ತಿಯನ್ನು ಅನುಗ್ರಹಿಸು" ಎಂಬುದಾಗಿ. ಮೂರು ಬಾರಿ ಗುರುಗಳು ನರೇಂದ್ರನನ್ನು ದಾರಿದ್ರ್ಯನಿವಾರಣೆಗಾಗಿ ತಾಯಿಯಲ್ಲಿ ಬೇಡು, ಎಂದು ಹೇಳಿಕಳುಹಿಸಿದರೂ ಮೂರು ಬಾರಿಯೂ ನರೇಂದ್ರನು ಜ್ಞಾನವನ್ನು ಭಕ್ತಿಯನ್ನು ಬೇಡಿ ಬಂದನು. ಗರ್ಭಗುಡಿಗೆ ಪ್ರವೇಶಿಸುತ್ತಲೇ ನರೇಂದ್ರನಿಗೆ ತನ್ನ ಮನೆಯ ಬಡತನದವಿಷಯ ಜ್ಞಾಪಕಕ್ಕೇ ಬರಲಿಲ್ಲ. ಕಡೆಗೆ ರಾಮಕೃಷ್ಣರೇ ನರೇಂದ್ರನ ಆರ್ತತೆಯನ್ನು ನೋಡಲಾರದೆ ದೇವಿಯ ಕೃಪೆಯಿಂದ ನರೇಂದ್ರನ ಮನೆಯವರಿಗೆ ಸಾಕಷ್ಟು ಅನ್ನ ದೊರೆಯಲೆಂದು ಅನುಗ್ರಹಿಸಿದರು.

ರಾಮಕೃಷ್ಣರು ತಮ್ಮ ತಪಶ್ಚರ್ಯೆಯಿಂದ ಕಂಡ ಬೆಳಕನ್ನು ನರೇಂದ್ರನಿಗೆ ಪೂರ್ತಿಯಾಗಿ ಉಪದೇಶಿಸಿ, ತಮ್ಮ ಅವಸಾನಕಾಲದಲ್ಲಿ ನರೇಂದ್ರನನ್ನು ಸಮೀಪಕ್ಕೆ ಕರೆದು "ನಿನ್ನ ವಿವೇಕ ವಿಕಾಸಹೊಂದಿ ಜಗತಿಯ ಕಲ್ಯಾಣಕ್ಕಾಗಿ ದುಡಿಯಲಿ" ಎಂದು ಆಶೀರ್ವದಿಸಿ ಕಣ್ಮರೆಯಾದರು.

ಈಗ ವಿವೇಕಾನಂದರ ಮೇಲೆ ಭಾರಿ ಜವಾಬ್ದಾರಿ ಬಿತ್ತು. ತಮ್ಮ ಮನೆಯವರ ರಕ್ಷಣೆಯ ಜೊತೆಗೆ, ನೂರಾರು ಮಂದಿ ಶಿಷ್ಯರ ರಕ್ಷಣೆಯ ಭಾರವೂ ಅವರದಾಯಿತು. ಆಗ್ಯೆ ಭಾರತವಲ್ಲಿ ಜನತೆಗೆ ಹೊಟ್ಟೆ ತುಂಬ ತಿನ್ನಲು ಅನ್ನವಿರಲಿಲ್ಲ. ಜ್ಞಾನ ಸಂಪಾದಿಸಲು ತಕ್ಕ ಸೌಕರ್ಯಗಳು ಇರಲಿಲ್ಲ. ಈ ಚಿತ್ರವನ್ನು ಕಂಡ ವಿವೇಕಾನಂದರಿಗೆ ಒಂದು ಸ್ಥಳದಲ್ಲಿ ಕೂರಲು ಮನಸ್ಸು

ಅವಕಾಶಕೊಡಲಿಲ್ಲ. ಜನರ ಅಜ್ಞತೆಯನ್ನು ಹೋಗಲಾಡಿಸಿ, ಭಾರತದ ಅಪೂರ್ವ ಸಂಸ್ಕೃತಿಯನ್ನು ಪ್ರಚಾರ ಮಾಡುವುದಕ್ಕಾಗಿ ಅವರು ಪ್ರವಾಸ ಕೈಗೊಂಡರು ಕ್ರಿ. ಶ. ೧೮೮೭ರಿಂದ ೧೮೯೩ರವರೆಗೆ ಅವರು ದೇಶದ ನಾನಾಕಡೆಗಳಲ್ಲಿ ಸಂಚರಿಸಿದರು. ಮೊದಲು ವಿವೇಕಾನಂದರು ಕಾಶೀ ಯಾತ್ರೆ ಹೊರಟರು. ಕಾಶಿಯಿಂದ ಅಯೋಧ್ಯೆ ಆಗ್ರಾ ಮಾರ್ಗವಾಗಿ ಬೃಂದಾವನಕ್ಕೆ ಬಂದರು. ಹೋದ ಕಡೆಯಲ್ಲೆಲ್ಲಾ ಉಪನ್ಯಾಸ, ವಿದ್ವಾಂಸ ರೊಡನೆ ಚರ್ಚೆ, ಪಂಡಿತರಿಂದ ಸಂದೇಹಪರಿಹಾರ, ಶಿಷ್ಯರಿಗೆ ಪಾಠ ಪ್ರವಚನ, ಭಗವಧ್ಯಾನ ಪ್ರಾರ್ಥನೆಗಳು ನಡೆಯುತ್ತಿದ್ದುವು. ಅಲ್ಲಿಂದ ಹೃಷೀಕೇಶ, ಹತ್ರಾಸ ಮುಂತಾದ ಸ್ಥಳಗಳಲ್ಲಿ ಸಂಚರಿಸಿ ರುದ್ರ ಪ್ರಯಾಗದ ಮೂಲಕ ಶ್ರೀನಗರಕ್ಕೆ ಬಂದರು. ಅಲ್ಲಿ ಒಂದು ತಿಂಗಳ ಕಾಲ ಶಿಷ್ಯರ ಪಾಠಪ್ರವಚನಗಳಲ್ಲಿ ಕಳೆದರು. ಬಹಳ ದಿನ ಒಂದು ಸ್ಥಳ ದಲ್ಲಿರಲು ಅವರು ಒಪ್ಪುತ್ತಿರಲಿಲ್ಲ. ಅಲ್ಲಿಂದ ದೆಹಲಿಗೆ ಬಂದರು. ಕೆಲವು ದಿನದಲ್ಲೇ ಅವರ ಖ್ಯಾತಿ ಎಲ್ಲೆಲ್ಲೂ ಹರಡಿತು. ದಾರಿಯುದ್ದಕ್ಕೂ ಜನರು ಅವರಿಗೆ ಸುಸ್ವಾಗತವಿತ್ತು ಅವರ ಉಪದೇಶವಾಣಿಯನ್ನು ಕೇಳಿದರು. ಅವರ ಮುಖ್ಯ ಉಪದೇಶವೇನೆಂದರೆ "ಎಲ್ಲರೂ ಪಾಶ್ಚಾತ್ಯ ವಿಜ್ಞಾನದೊಡನೆ ಸಂಸ್ಕೃತ ವನ್ನೂ ಅಭ್ಯಾಸಮಾಡಬೇಕು, ಜ್ಞಾನಾರ್ಜನೆಗಾಗಿ ಸತತವಾಗಿ ದುಡಿಯ ಬೇಕು. ಭಾರತೀಯ ಇತಿಹಾಸವನ್ನು ನಿಷ್ಪಕ್ಷವಾಗಿ ತಿಳಿಯಬೇಕು. ಭಾರತೀಯ ಇತಿಹಾಸವನ್ನು ಆಂಗ್ಲೇಯರು ಮನಬಂದಂತೆ ಬರೆದು ಕೆಡಿಸಿರು ತ್ತಾರೆ. ಪಾಶ್ಚಾತ್ಯರು ಇಲ್ಲಿನ ನೈಜವಾದ ಸಂಸ್ಕೃತಿಯನ್ನು ಹ್ಯಾಗೆ ತಿಳಿದಾರು? ಭಾರತೀಯರಾದ ನೀವು ಜ್ಞಾನವನ್ನು ಸಂಪಾದಿಸಿ ಇಲ್ಲಿನ ಸಂಸ್ಕೃತಿಯನ್ನು ಸಂಗ್ರಹಿಸಿ ಬರೆಯಿರಿ. ಪ್ರಚಾರಮಾಡಿರಿ. ಆಗ ಭಾರತ ಎಚ್ಚೆತ್ತುಕೊಳ್ಳು ತ್ತದೆ. ಪ್ರತಿಯೊಬ್ಬನಲ್ಲೂ ಸಹೋದರ ಭಾವ ರಾಷ್ಟ್ರೀಯತೆ ಬೆಳೆಯುತ್ತದೆ" ಎಂಬುದಾಗಿ. ಡೆಲ್ಲಿಯಿಂದ ಅವರು ಅನೇಕ ಪವಿತ್ರ ಸ್ಥಳಗಳನ್ನು ಸಂದರ್ಶಿಸಿ ಜಯಪುರಕ್ಕೆ ಬಂದರು. ಅವರು ಅಲ್ಲಿ ವ್ಯಾಕರಣ ಪಂಡಿತರೊಬ್ಬರ ಆಶ್ರಯ ದಿಂದ ಪಾಣಿನೀಯ ಸೂತ್ರಗಳ ಮತ್ತು ಭಾಷ್ಯದ ಪರಿಚಯ ಮಾಡಿಕೊಂಡರು. ಮನುಷ್ಯನಿಗೆ ಉತ್ಕಟೇಚ್ಛೆಯಿದ್ದರೆ ಯಾವುದನ್ನಾದರೂ ಸಾಧಿಸಬಹುದೆಂದು ಅವರು ತೋರಿಸಿಕೊಟ್ಟರು. ಅಲ್ಲಿಂದವರು ಅಜ್ಮೀರದ ಮಾರ್ಗವಾಗಿ ಅಬು ಬೆಟ್ಟಕ್ಕೆ ಬಂದರು. ಅಲ್ಲೊಬ್ಬ ಮುಸಲ್ಮಾನನು ಸ್ವಾಮಿಯವರ ವೈದುಷ್ಯಕ್ಕೂ

ತೇಜಸ್ಸಿಗೂ ಅಧೀನನಾಗಿ ತನ್ನ ಮನೆಯನ್ನೇ ವಾಸಕ್ಕಾಗಿ ಬಿಟ್ಟುಕೊಟ್ಟನು. ಸ್ವಾಮಿಯವರ ಬಾಯಿಂದ ರಾಮಕೃಷ್ಣರ ಚರಿತ್ರೆಯನ್ನು ಕೇಳಿ ಅಲ್ಲಿಯ ಮಹಾರಾಜರು ಅವರನ್ನು ತಮ್ಮ ಊರಾದ "ಖೇತ್ರಿ" ಎಂಬಲ್ಲಿಗೆ ಕರೆದು ಕೊಂಡು ಹೋದರು. ಭಕ್ತಿಯಿಂದ ಅವರ ಸೇವೆಮಾಡಿ ತಾನೂ ಅವರ ಶಿಷ್ಯ ನಾದನು. ಬೇಸಗೆಯ ಕಾಲವನ್ನು ಅಲ್ಲಿ ಸ್ವಲ್ಪ ತಳ್ಳಿ ಅಹಮದಾಬಾದಿನ ಮಾರ್ಗವಾಗಿ ಬೊಂಬಾಯಿಗೆ ಬಂದರು. ಪುಣೆಯಲ್ಲಿ ನೆಲೆಸಿದ್ದ ಬಾಲ ಗಂಗಾಧರ ತಿಲಕರ ಪ್ರಾರ್ಥನೆಯ ಮೇಲೆ ಸ್ವಾಮಿಯವರು ಪುಣೆಯಲ್ಲಿ ತಿಲಕರ ಮನೆಯಲ್ಲಿ ಕೆಲವು ದಿನ ತಂಗಿ, ಗೋವಾ ಮಾರ್ಗವಾಗಿ ಬೆಂಗಳೂರಿಗೆ ಬಂದರು. ಆಗ ಬೆಂಗಳೂರಿನಲ್ಲಿ ಸರ್. ಕೆ. ಶೇಷಾದ್ರಿಯವರು ದಿವಾನರಾಗಿದ್ದರು. ದಿವಾನರ ಮೂಲಕ ಶ್ರೀಮನ್ಮಹಾರಾಜ ಚಾಮರಾಜಒಡೆಯರವರಿಗೂ ಸ್ವಾಮಿ ಗಳಿಗೂ ಪರಸ್ಪರ ಪರಿಚಯವಾಯಿತು. ಮಹಾರಾಜರು ಸ್ವಾಮಿಗಳೊಡನೆ ಘಂಟೆಗಟ್ಟಲೆ ಕೂತು ಅನೇಕ ವಿಷಯಗಳನ್ನು ಚರ್ಚಿಸಿದರು ಅವರಿಂದ ಸ್ವಾಮಿಗಳು ಬೀಳ್ಕೊಂಡು ರಾಮೇಶ್ವರದ ಮಾರ್ಗವಾಗಿ ದಕ್ಷಿಣ ಭಾರತದ ಕೊನೆಯಾದ ಕನ್ಯಾಕುಮಾರಿಗೆ ಬಂದಿಳಿದರು. ಸಮುದ್ರದ ದಡ ದಲ್ಲಿದ್ದ ಒಂದು ಬಂಡೆಯ ಮೇಲೆ ಕುಳಿತು ಅವರು ಭಾರತದ ದಾರಿದ್ರ್ಯ ಪರಿಹಾರಕ್ಕಾಗಿ ಚಿಂತಿಸುತ್ತಿದ್ದರು ಪರದೇಶಗಳಲ್ಲಿ ಭಾರತದ ಸಂಸ್ಕೃತಿಯನ್ನು ಪ್ರಚಾರ ಮಾಡಿ, ಆ ಮೂಲಕ ಭಾರತಕ್ಕೆ ನೆರವನ್ನು ಸಂಪಾದಿಸಬೇಕೆಂದು ಅವರಿಗೆ ಹೊಳೆಯಿತು. ಅವರು ಧ್ಯಾನ ಮಾಡಲು ಕುಳಿತಿದ್ದ ಕಲ್ಲನ್ನು ಈಗಲೂ ಅಲ್ಲಿ " ವಿವೇಕ ರಾಕ್ " ಎಂದು ಕರೆಯುತ್ತಾರೆ. ಅಲ್ಲಿಂದ ಅವರು ಮದ್ರಾಸಿಗೆ ಬಂದರು. ಅಮೇರಿಕಾದಲ್ಲಿ " ಸರ್ವಧರ್ಮ ಸಮ್ಮೇಳನ "ವೆಂಬ ಸಮ್ಮೇಳನವು ನಡೆಯಲು ಏರ್ಪಾಟಾಗಿತ್ತು. ಭಾರತ ಜನತೆಯ ಇಷ್ಟಪ್ರಕಾರ ಸ್ವಾಮಿಯವರು ಕ್ರಿ. ಶ. ೧೮೯೩ನೇ ಮೇ ಮಾಹೇ ೩೧ನೇ ತಾರೀಖು ಹಡಗು ಹತ್ತಿ ಅಮೇರಿಕಾಕ್ಕೆ ಪ್ರಯಾಣ ಬೆಳೆಸಿದರು. ಹಡಗು ವಾಂಕುವಾಗೆ ಹೋಯಿತು. ಅವರು ಅಲ್ಲಿ ರೈಲು ಹತ್ತಿ ಜನಸಂದಣಿ ಯಿಂದ ಕಿಕ್ಕಿರಿದ ಚಿಕಾಗೋ ಪಟ್ಟಣಕ್ಕೆ ಬಂದು ಒಂದು ಹೋಟಲಿನಲ್ಲಿ ಇಳಿದುಕೊಂಡರು. ಆ ಸಮ್ಮೇಲನಕ್ಕೆ ವಿಶ್ವದ ನಾನಾ ಮೂಲೆಗಳಿಂದ ಅನೇಕ ಪ್ರತಿನಿಧಿಗಳು ಅಲ್ಲಿಗೆ ಬಂದು ನೆರೆದಿದ್ದರು. ನಿರ್ದಿಷ್ಟ ದಿನ ಸಮ್ಮೇಳನ ದಲ್ಲಿ ಪ್ರತಿನಿಧಿಗಳ ಭಾಷಣಗಳಾದುವು. ಡಾ|| ಬಾರೋಸ್ ಎಂಬುವರು

ಸ್ವಾಮಿಗಳ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಸ್ವಾಮಿಯವರು ಉಪನ್ಯಾಸ ವೇದಿಕೆಯಲ್ಲಿ ನಿಂತು ತಮ್ಮ ಗಂಭೀರವಾದ ಕಂಠದಿಂದ "ಅಮೇರಿಕದ ಸೋದರ ಸೋದರಿಯರೇ" ಎಂಬ ಸಂಬೋಧನೆಯಿಂದ ಉಪನ್ಯಾಸ ಪ್ರಾರಂಭಿಸಿದರು. ಇದೊಂದು ಮಾತನ್ನು ಕೇಳಿದ ಸಭೆಯು ಕರತಾಡನ ಮಾಡಿ ಅವರ ಪರವಾಣಿಯನ್ನು ಕೇಳಿತು. ಐದಾರು ಸಾವಿರ ಮಂದಿ ಸಭಿಕರಿದ್ದ ಸಭೆ ಸ್ವಾಮಿಯವರ ವಾಣಿಯನ್ನು ಕೇಳಿ ಬೆರಗಾಯಿತು; ಮಾರನೆ ದಿನವೆ ಶಿರೋನಾಮೆಯಲ್ಲಿ ಪತ್ರಿಕೆಗಳು ಸ್ವಾಮಿಯವರ ಉಪನ್ಯಾಸ ಸಾರವನ್ನು ಪ್ರಕಟಿಸಿದುವು. ಭಾರತದ ಬಡ ಸನ್ಯಾಸಿಯ ಮಾತನ್ನು ವಿಲಾಯಿತಿಯ ಶ್ರೀಮಂತರ ತಂಡವು ಶ್ರದ್ಧೆಯಿಂದ ಕೇಳಿ ಗೌರವಿಸಿದುವು. ಅನೇಕ ರಾಷ್ಟ್ರಗಳು ಅವರ ವಾಣಿಯನ್ನು ಕೇಳಲು ಆಹ್ವಾನವಿತ್ತವು. ಅಮೇರಿಕಾದ ಪ್ರಸಿದ್ಧ ಪಟ್ಟಣಗಳಾದ ಸೇಂಟ್ ಲೂಯಿ, ಕೇಂಬ್ರಿಡ್ಜ್, ವಾಷಿಂಗ್ಟನ್ ಮುಂತಾದ ಸ್ಥಳಗಳಲ್ಲಿ ಉಪನ್ಯಾಸಗಳಾದುವು. ಸ್ವಾಮಿಯವರು ಭಾರತದ ಸಂಸ್ಕೃತಿಯನ್ನು ಅಲ್ಲಿ ಬೆಳಗಿಸಿದರು. ಪಾಶ್ಚಾತ್ಯರ ದುರ್ವರ್ತನೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು. ವಾರಕ್ಕೆ ೧೨-೧೫ ಉಪನ್ಯಾಸಗಳು. ಸ್ವಾಮಿಗಳಿಗೆ ಬಿಡುವಿಲ್ಲದ ಕಾರ್ಯಕ್ರಮ. ತಮ್ಮ ಅದ್ಭುತ ಶಕ್ತಿಯಿಂದ ಅಮೇರಿಕಾಕ್ಕೂ ಭಾರತಕ್ಕೂ ಸಮೀಪ ಬಾಂಧವ್ಯವನ್ನುಂಟು ಮಾಡಿ, ಭಾರತವನ್ನು ಗೌರವವಾಗಿ ಕಾಣುವಂತೆ ಮಾಡಿದರು. ಅಲ್ಲಿಯೂ ಅನೇಕ ಮಂದಿ ಸ್ವಾಮಿಗಳ ಶಿಷ್ಯರಾದರು. ಅಮೇರಿಕಾದ ಜನರ ಮನಸ್ಸನ್ನು ಸೂರೆಗೊಂಡು ಸ್ವಾಮಿಗಳು ಇಂಗ್ಲೆಂಡಿಗೆ ಬಂದರು. ಅಲ್ಲಿಯೂ ಅನೇಕ ಉಪನ್ಯಾಸ ಮಾಡಿ ಜನರನ್ನು ಎಚ್ಚರಿಸಿದರು. ಮೂರು ತಿಂಗಳನಂತರ ಪುನಃ ಅಮೇರಿಕಾಕ್ಕೆ ಹೋದರು. ಅಲ್ಲಿ ವೇದಾಂತ ಸಂಘವೊಂದನ್ನು ಸ್ಥಾಪಿಸಿದರು. ಭಾರತದ ಪ್ರಾರ್ಥನೆಯಂತೆ ಅವರು ಕ್ರಿ. ಶ. ೧೮೯೬ನೆ ಡಿಸೆಂಬರ್ ತಿಂಗಳಲ್ಲಿ ತಮ್ಮ ಸ್ವದೇಶಕ್ಕೆ ಹಿಂತಿರುಗಿದರು. ಜನವರಿಯಲ್ಲಿ ಮದ್ರಾಸಿಗೆ ಬಂದಿಳಿದರು. ಭಾರತದ ಸುಪುತ್ರನಿಗೆ ಜನತೆ ಅಭೂತಪೂರ್ವ ಸ್ವಾಗತ ನೀಡಿತು. ಫೆಬ್ರವರಿ ತಿಂಗಳಲ್ಲಿ ಸ್ವಾಮಿಗಳು ಕಲ್ಕತ್ತೆಗೆ ಪ್ರಯಾಣ ಮಾಡಿದರು. ಅಲ್ಲಿ ಅನೇಕ ಶಿಷ್ಯರನ್ನು ತಯಾರುಮಾಡಿ ಮಾನವನ ಅಜ್ಞಾನ ನಿರ್ಮೂಲಕ್ಕಾಗಿ ಭಾರತದ ನಾನಾ ಕಡೆಗೆ ಕಳುಹಿಸಿದರು. ಅಲ್ಲಲ್ಲಿ ವಿದ್ಯಾ ಪ್ರಚಾರಕ್ಕಾಗಿ ತಮ್ಮ ಗುರುಗಳ ಹೆಸರಿನಿಂದ "ರಾಮಕೃಷ್ಣಾಶ್ರಮ" ಎಂಬ ಹೆಸರಿನಿಂದ ಆಶ್ರಮಗಳನ್ನು ಸ್ಥಾಪಿಸಿದರು. ಪುನಃ ಅವರು ೧೮೯೭ರಲ್ಲಿ

ಅಮೇರಿಕಾದಲ್ಲಿ ತಾವು ಪ್ರಾರಂಭಿಸಿದ್ದ ಕಾರ್ಯಭಾಗಗಳನ್ನು ನೋಡಲು ಪ್ರಯಾಣ ಮಾಡಿದರು. ಅಮೇರಿಕ, ಇಂಗ್ಲೆಂಡ್, ಪ್ಯಾರಿಸ್ ಮುಂತಾದ ನಗರಗಳನ್ನು ಸುತ್ತಿಕೊಂಡು ೧೯೦೦ನೇ ಡಿಶೆಂಬರ್ ತಿಂಗಳಲ್ಲಿ ತಮ್ಮ ಮಾತೃ ಭೂಮಿಗೆ ಬಂದರು. ಕಲ್ಕತ್ತೆಯ ಬೇಲೂರು ಕ್ಷೇತ್ರದಲ್ಲಿ ಸ್ವಾಮಿಗಳು ಬಂದು ನೆಲೆಸಿದರು. ದೇಶದೇಶಗಳನ್ನು ಸುತ್ತಿದ ಸ್ವಾಮಿಗಳ ಶರೀರಕ್ಕೆ ಅನಾರೋಗ್ಯ ತಟ್ಟಿತು. ವಿವೇಕಾನಂದರು ಒಂದು ದಿನ ಆಶ್ರಮದ ಹೊರಗಡೆ ಸಂಚರಿಸುತ್ತಾ ತಮ್ಮ ಶಿಷ್ಯ ಪ್ರೇಮಾನಂದರನ್ನು ಕರೆದು ನನ್ನ ಶರೀರ ತ್ಯಾಗಾನಂತರ ಈ ಗಂಗಾತೀರದ ಈ ಪವಿತ್ರ ಸ್ಥಳದಲ್ಲಿ ಸಮಾಧಿ ಮಾಡಬೇಕೆಂದು ಸೂಚಿಸಿದರು. "ಸುಕೃತೀ ಗತಾಯುಃ" ಎಂಬಂತೆ ವಿಧಿಯು ಸುಕೃತಿಗಳಿಗೆ ದೀರ್ಘಾ ಯುಸ್ಸನ್ನು ಕೊಡುವುದಿಲ್ಲ. ಸ್ವಾಮಿಯವರ ಅನಾರೋಗ್ಯ ದಿನದಿನಕ್ಕೆ ಹೆಚ್ಚಿತು. ವೈದ್ಯರ ಔಷಧೋಪಚಾರಗಳು ಫಲಕಾರಿಯಾಗಲಿಲ್ಲ. ಸ್ವಾಮಿ ಯವರಿಗೆ ಭಗವಂತನು ಕೇವಲ ೩೯ ವರ್ಷ ಆಯುಸ್ಸನ್ನು ವಿಧಿಸಿರುವಾಗ ಅವರ ಭೌತಿಕ ಶರೀರವನ್ನು ಮನುಷ್ಯ ಮಾತ್ರನು ರಕ್ಷಿಸಲು ಸಮರ್ಥ ನಾದಾನೆ? ೧೯೦೨ನೆ ಜುಲೈ ತಿಂಗಳು ೪ನೇ ತಾರೀಖು ಬಂತು ಸ್ವಾಮಿಗಳು ಉಷಃಕಾಲದಲ್ಲೇ ಎದ್ದು ದೇವ ಮಂದಿರವನ್ನು ಪ್ರವೇಶಿಸಿ ಕಿಟಕಿಯ ಬಾಗಿಲುಗಳನ್ನು ಮುಚ್ಚಿ ದೀರ್ಘಕಾಲ ಧ್ಯಾನ ಮಗ್ನರಾದರು. ಭಕ್ತಿರಸ ಚೆಲ್ಲುವ ಕೀರ್ತನೆಗಳನ್ನು ಇಂಪಾಗಿ ಹಾಡಿದರು. ಯಾರ ಸಂಗಡಲೂ ಕೂತು ಊಟ ಮಾಡದ ಸ್ವಾಮಿಗಳು ಆದಿನ ತಮ್ಮ ಶಿಷ್ಯಮಂಡಳಿಯ ಮಧ್ಯೆ ಕುಳಿತು ಊಟ ಮಾಡಿದರು. ಆದಿನ ಅವರಲ್ಲಿ ಕೆಲವು ಬದಲಾವಣೆಗಳು ಕಂಡು ಬಂದುವು. ಸಾಯಂಕಾಲದ ವೇಳೆಗೆ ಅವರು ಅಂತರ್ಮುಖಿ ಗಳಾಗುತ್ತಾ ಬಂದರು. ತಮ್ಮ ಏಕಾಂತವಾದ ಕೊಠಡಿಯನ್ನು ಸೇರಿ ನನ್ನನ್ನು ಯಾರೂ ಎಚ್ಚರಿಸಕೂಡದೆಂದು ಹೇಳಿ ಮಲಗಿದರು. ಸ್ವಾಮಿ ಪ್ರೇಮಾನಂದರು ರಾಮಕೃಷ್ಣರ ಪವಿತ್ರನಾಮವನ್ನುಚ್ಚರಿಸುತ್ತಿರಲು ಸ್ವಾಮಿ ವಿವೇಕಾನಂದರು ದೀರ್ಘಶಾಂತಿ ಪಡೆದರು. ಶಿಷ್ಯಮಂಡಲಿಯು ಕಣ್ಣೀರ್ಗರೆ ಯುತ್ತಾ ಅವರ ಕಳೇಬರದ ಮೇಲೆ ಅಂತಿಮ ಪುಷ್ಪಾಂಜಲಿಯನ್ನು ಸಮರ್ಪಿಸಿತು. ಸ್ವಾಮಿ ವಿವೇಕಾನಂದರ ದೇಹವು ಮಾತ್ರ ಕಣ್ಮರೆ ಯಾಯಿತು. ಅವರ ವಿವೇಕವಾಣಿ ಚಿರಾಯುವಾಗಿ ನಿಂತಿದೆ. ಅವರ ದಿವ್ಯಾತ್ಮಕ್ಕೆ ಆನಂದವೂ ಶಾಂತಿಯೂ ದೊರೆಯುತ್ತದೆ.

---